# ನವಯುಗ

ಪ್ರಮುಖ ಕನ್ನಡ ವಾರಪತ್ರಿಕೆ



NAVAYUGA

28—9—1967

೧೦ ಪೈಸೆ

ಕಥಾ ಪ್ರಪಂಚ

# ಪ್ರೇಮಬಂಧನ

ಬರೆದವರು :
ಶ್ರೀ ಸ. ನಾರಾಯಣ, ಚಿತ್ರದುರ್ಗ.

ರಜನಿ ಪತ್ರ ಓದುತ್ತಾ ನಿಂತಿದ್ದಳು.

ಪತ್ನಿಯ ಏಕಾಗ್ರ ಚಿತ್ತತೆಗೆ ಭಂಗ ತಾರದೆ ಗೋಪಿ ಬಾಗಿಲಲ್ಲಿಯೇ ನಿಂತಿದ್ದ.

ರಜನಿ ಪತ್ರ ಓದಿ ಮುಗಿಸಿ ಮಡಿಚಿದಳು. ಅವಳ ಕಣ್ಣಿಂದ ಹನಿ ಜಾರಿ ಉರುಳಿತು. ಗೋಪಿಗೆ ಕಾರಣ ಗೊತ್ತಾಗಲಿಲ್ಲ.

"ಯಾರದು ರಜನಿ ಕಾಗದ?" ಎಂದ ಗೋಪಿ.

"ನನ್ನದೆ.... ಹೋಗಲಿ ಬಿಡಿ' ಎಂದು ನೋವಿನ ದನಿಯಲ್ಲಿ ಹೇಳಿದಳು ರಜನಿ.

"ನಿನ್ನದೆ ಇರಬಹುದು.... ಕಾಗದ ಓದಿದರೆ ಕಣ್ಣಲ್ಲೇಕೆ ನೀರು?'

'ದಯವಿಟ್ಟು ಆ ವಿಷಯದ ಪ್ರಸ್ತಾಪ ಬೇಡ" ಎಂದಳು ರಜನಿ.

ಗೋಪಿಗೆ ಸಮಾಧಾನವಾಗಲಿಲ್ಲ. ಪತ್ನಿಯಿಂದ ಪತ್ರ ಪಡೆದು ಸಂಗತಿಯನ್ನು ತಿಳಿಯಲು ಕಾತುರನಾಗಿ; "ಸ್ವಲ್ಪ ಪತ್ರ ಕೊಡು ರಜನಿ" ಎಂದ.

"ದಯವಿಟ್ಟು ಬೇಡಿ"

"ಏಕೆ"

"ನಿಮ್ಮ ಮನ ನೋಯಿಸುವ ಇಚ್ಛೆ ನನಗಿಲ್ಲ"

"ನೀನು ಕೊಡದೆ ಹೋದರೆ ಹೆಚ್ಚು ವ್ಯಥೆಯಾಗುತ್ತದೆ....ತಾ ಇಲ್ಲಿ"

'ಉಹುಂ"

"ಓಹೋ ಹಾಗೋ" ಎಂದು ಗೋಪಿ ಅವಳ ಕೈಯಲ್ಲಿದ್ದ ಪತ್ರಕ್ಕೆ ಕೈ ಚಾಚಿದ. ಇಬ್ಬರ ಎಳೆದಾಟದಲ್ಲಿ ಪತ್ರದ ಸ್ವಲ್ಪ ಭಾಗ ಗೋಪಿ ಕೈಗೆ ಬಂತು. ಉಳಿದುದನ್ನು ರಜನಿ ಗಂಡನೆದುರಿನಲ್ಲಿಯೇ ಹರಿದು ಹಾಕಿದಳು.

ಗೋಪಿಯ ರಕ್ತ ಕುದಿಯಿತು. ರಜನಿ ಎಂದೂ ಆ ಬಗೆಯಲ್ಲಿ ವಿರೋಧಿಸಿರಲಿಲ್ಲ. ಕೋಪದಿಂದ ಕೆರಳಿ "ಕಾಗದ ಏಕೆ ಹರಿದು ಹಾಕಿದೆ?" ಎಂದ.

"ನಿಮಗೆ ಗೊತ್ತಾದರೆ...ಅಲ್ಲದೆ ನೀವು ತಿಳಿಯಲೇ ಬೇಕಾದ ವಿಷಯವೂ ಇರಲಿಲ್ಲ"

"ಹಾಗಲ್ಲ'

"ಮತ್ತೆ!'

"ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದರೆ ಉಳಿದವರಿಗೆ ಗೊತ್ತಾಗುವುದಿಲ್ಲವೇ....ನಿನ್ನ ಹಳೆಯ ಪ್ರಿಯತಮನ ಪತ್ರ ಎಂದು ಹೇಳಿಕೋ...ಏಕಿಷ್ಟು ನಾಟಕ?" ಎಂದ ವ್ಯಂಗ್ಯವಾಗಿ.

ರಜನಿಗೆ ಸಿಡಿಲು ಬಡಿದಂತಾಯ್ತು.

"ರಾಮ.... ರಾಮ.... ಇದೇನ್ರೀ ನಿಮ್ಮ ಮಾತು?" ಎಂದು ಅಳುವಿನ ದನಿಯಲ್ಲಿ ಹೇಳಿದ ರಜನಿ ಕಿವಿ ಮುಚ್ಚಿಕೊಂಡಳು.

"ಎಷ್ಟು ದಿವದಿಂದ ಈ ನಾಟಕ?"

'ಹಾಗಲ್ಲರೀ'

"ನನಗೆ ಅದೆಲ್ಲ ಬೇಕಿಲ್ಲ.... ನಾಳೆ ಪ್ರಯಾಣಕ್ಕೆ ಸಿದ್ಧಪಡಿಸಿಕೋ.... ನನಗೂ ನಿನಗೂ ಇಂದಿಗೇ ಋಣಾನುಬಂಧ ಹರಿಯಿತು' ಎಂದು ಕೋಪದಿಂದಲೇ ಹೇಳಿದ ಗೋಪಿ.

ರಜನಿ ಅಳುತ್ತಾ "ನೀವು ತಪ್ಪಾಗಿ ಭಾವಿಸಿದ್ದೀರಿ.... ಅಪಾರ್ಥ ಮಾಡಿಕೊಳ್ಳಬೇಡಿ, ಕ್ಷಮಿಸಿ' ಎಂದು ಅವನ ಕಾಲು ಹಿಡಿಯಲು ಹೋದಳು. ಕೋಪದಿಂದ ಕೆರಳಿದ್ದ ಗೋಪಿ ಹೆಂಡತಿಯ ಕೆನ್ನೆಗೆ ಬಲವಾಗಿ ಹೊಡೆದ.

"ಅಮ್ಮಾ" ಎಂದು ಚೀರಿ ರಜನಿ ನೆಲದ ಮೇಲುರುಳಿದಳು.

ಸೊಸೆಯ ಕೂಗು ಕೇಳಿ ರಾಜಮ್ಮ ಕೋಣೆಗೆ ಧಾವಿಸಿ ಬಂದರು.

ಅಲ್ಲಿಯ ದೃಶ್ಯ ನೋಡಿ ಅವರ ಕಣ್ಣಿಗೆ ಕತ್ತಲೆ ಕವಿಯಿತು.

"ನೀನು ಗಂಡನಾದುದಕ್ಕೆ ಸಾರ್ಥಕವಾಯ್ತು ಗೋಪಿ.... ಆ ಹುಡುಗಿ ಅದೇನು ತಪ್ಪು ಮಾಡಿತ್ತೊ!' ಎಂದು ಸೊಸೆಯನ್ನು ಮಮತೆಯಿಂದ ಎತ್ತಿಕೊಂಡರು.

'ನನ್ನನ್ನೇನು ಕೇಳಬೇಡ ನಿನ್ನ ಮುದ್ದು ಸೊಸೆಯನ್ನು ಕೇಳು' ಎಂದ ಗೋಪಿ ಕೋಟನ್ನು ಕೈಗೆತ್ತಿಕೊಂಡು ನಡೆದ.

ಅತ್ತೆಯ ಎಲ್ಲ ಪ್ರಶ್ನೆಗಳಿಗೂ ಸೊಸೆಯ ಕಣ್ಣೀರೇ ಉತ್ತರ.

o o o o

. ಗೋಪಿ ಪೇಟೆಯಲ್ಲಿ ಅವಸರ ಮತ್ತು ಬೇಸರದಿಂದಲೇ ನಡೆದು ಬರುತ್ತಿದ್ದ. ಪತ್ನಿಯ ಬಗ್ಗೆ ವೃಥಾ ಸಂಶಯ ತಾಳಿದ್ದ.

ರಜನಿ ತಾನು ಪತ್ರ ಹರಿದು ಹಾಕಬಾರದಿತ್ತು ಎಂದು ಕೊಂಡಿದ್ದಳು.

—"ರಜನಿಯನ್ನು ನಂಬಿದ್ದೆ. ನಂಬಿಸಿ ಮೋಸ ಮಾಡಿದಳು. ಅವಳಿಗೆ ಯಾವ ಕೊರತೆಯೂ ಇರಲಿಲ್ಲ. ಆದರೂ ಯಾರೋ ಹಳೆಯ ಗೆಳೆಯನೊಂದಿಗೆ ಪತ್ರ ವ್ಯವಹಾರ ಇಟ್ಟು ಕೊಂಡಿದ್ದಾಳೆ. ನನ್ನ ಪ್ರೀತಿಯನ್ನೆಲ್ಲಾ ಅವಳಿಗೆ ಧಾರೆ ಎರೆದಿದ್ದೆ; ನನಗೆ ಅನ್ಯಾಯ ಮಾಡಿದಳು, ಮೊದಲು ಅವಳನ್ನು ತವರು ಮನೆಗೆ ಕಳುಹಿಸಿದರೆ ಸಾಕು...." ಎಂದುಕೊಂಡು ಬರುತ್ತಿದ್ದ.

ಯಾರೋ ಚಪ್ಪಾಳೆ ತಟ್ಟಿ ಕೂಗಿದಂತಾಯ್ತು. ಗೋಪಿ ಹಿಂತಿರುಗಿ ನೋಡಿದ.

ಅವನ ಕಣ್ಣನ್ನು ಅವನೇ ನಂಬದಾದ. ಗೆಳೆಯ ಷರೀಫ್ ನಿಂತಿದ್ದ. ಹಳೆಯ ಗೆಳೆಯನನ್ನು ಕಂಡೊಡನೆಯೇ ಗೋಪಿಗೆ ಅಮಿತಾನಂದವಾಯಿತು. "ಹಲೋ ಷರೀಫ್" ಎಂದು ಕೂಗಿ ಅವನ ಬಳಿಗೆ ನಡೆದ.

ಗೆಳೆಯನ ಕೈಗಳನ್ನು ಹಿಡಿದು "ಚನ್ನಾಗಿದ್ದೀಯಾ ಭಾಯಿ" ಎಂದ ಷರೀಫ್.

"ಇಷ್ಟರ ಮಟ್ಟಿಗೆ ಇದ್ದೇನೆ, ನೀನು ಚನ್ನಾಗಿದ್ದೀಯೇನಯ್ಯ?"

"ಹೀಗೆ ಇದ್ದೇನಪ್ಪ'

"ಬೊಂಬಾಯಿಯಿಂದ ಯಾವಾಗ ಬಂದೆ ಷರೀಫ್'

"ನಿನ್ನೆ ಸಂಜೆ ಬಂದೆ....ನಿನ್ನನ್ನು ನೋಡಲು ನಿಮ್ಮ ಮನೆಗೆ ಬರಬೇಕೆಂದಿದ್ದೆ. ಅದೃಷ್ಟವಶಾತ್ ನೀನೇ ಭೇಟಿಯಾದೆ... ತುಂಬ ಸಂತೋಷ.... ಬಹೆನ್ ಚನ್ನಾಗಿದ್ದಾರಾ ಗೋಪಿ"

"ಹೂನಪ್ಪ" ಎಂದು ನಿರುತ್ಸಾಹದಿಂದಲೇ ನುಡಿದ ಗೋಪಿ.

'ಏಕೋ ಬೇಸರಪಟ್ಟುಕೊಂಡಿರುವಂತಿದೆ".

"..............."

"ಬಾ ಗೋಪಿ ತುಂಬ ಅಪರೂಪಕ್ಕೆ ಭೇಟಿಯಾಗಿದ್ದೇವೆ. ಲಾಲ್‌ಬಾಗ್ ಕಡೆಗಾದರೂ ಹೋಗಿ ಬರೋಣ....ಸಮಯವಿದೆಯಷ್ಟೆ?' ಎಂದ ಷರೀಫ್.

'ನನಗಿನ್ನೇನು ರಾಜಕಾರಣ ...ನಡೆ ಹೋಗೋಣ' ಎಂದ ಗೋಪಿ.

ಗೋಪಿ ಗೆಳೆಯನ ಕಾರು ಹತ್ತಿದ. ಷರೀಫ್ ಕಾರನ್ನು ಲಾಲ್‌ಬಾಗಿನ ಮುಂದೆ ನಿಲ್ಲಿಸಿ ಗೆಳೆಯನೊಂದಿಗೆ ಒಳಕ್ಕೆ ನಡೆದ.

ರೆಸ್ಟೋರಾದಲ್ಲಿ ತಿಂಡಿ ಕಾಫಿ ಮುಗಿಸಿ ಇಬ್ಬರೂ ಕಾರಂಜಿಯ ಬಳಿಯಲ್ಲಿದ್ದ ಮರದ ಕೆಳಗೆ ಕುಳಿತರು.

ಸ್ವಲ್ಪ ಹೊತ್ತು ಲೋಕಾಭಿರಾಮವಾಗಿ ಮಾತು ಸಾಗಿತು.

ಷರೀಫ್ ನೆನಪು ಮಾಡಿಕೊಂಡವನಂತೆ "ಮುಖ್ಯವಾದ ವಿಷಯವನ್ನೇ ಮರೆತಿದ್ದೆ ಗೋಪಿ' ಎಂದ.

"ಅದೇನಯ್ಯ ಅಂಥ ವಿಷಯ'.

"ನೀವು ಬೊಂಬಾಯಿಗೆ ಬಂದು ತುಂಬ ದಿವಸವಾಯ್ತಲ್ಲ?'

"ಎರಡು ವರ್ಷದ ಮೇಲಾಗಿದೆ....ಸಮಯವೇ ದೊರೆಯುವುದಿಲ್ಲ'

"ನಿಮಗೇನೋ ಫ್ಯಾಕ್ಟರಿ ಕೆಲಸ ಬಿಡುವಿಲ್ಲ. ಬೆಹನ್‌ಗೇನು ಕೆಲಸ....ಅವರಾದರೂ ಅಲ್ಲಿಗೆ ಬರಬಹುದಿತ್ತಲ್ಲ?"

'ಅವಳಿಗೆ ಎಷ್ಟೋ ಬಾರಿ ಹೇಳಿದೆ. ಅವಳೇ ಹೋಗಲು ಒಪ್ಪುವುದಿಲ್ಲ"

'ಗಂಡನಿಗೆ ತಕ್ಕ ಹೆಂಡತಿ"

'..............'

'ನಿಮ್ಮ ಮಾವ ಸಿಕ್ಕಿದ್ದರು... ಅವರ ಮನೆಗೂ ಹೋಗಿದ್ದೆ.... ನಿಮ್ಮ ಅತ್ತೆ ಮಾವ ತುಂಬ ನೊಂದುಕೊಂಡು ಹೇಳಿದರು. ಬೆಹನ್ ಒಂದು ಬಾರಿಯೂ ಅಲ್ಲಿಗೆ ಹೋಗಿಲ್ಲವಂತೆ. ನಿಮಗೆ ಕಾಗದ ಬರೆದರೆ ಉತ್ತರವನ್ನೇ ಬರೆಯುವುದಿಲ್ಲವಂತೆ'

'ನನ್ನ ಬದಲಾಗಿ ಅವರ ಮಗಳೇ ಉತ್ತರ ಬರೆದಿದ್ದಳು ಕಣಯ್ಯ"

"ನಿಮ್ಮ ಮಾವ ಏನು ಹೇಳಿದರು ಗೊತ್ತೆ?"

"ನನಗೇನು ಗೊತ್ತು'

"ನನಗೆ ಹೋಗಿ ಬರಲು ಪುರುಸೊತ್ತಿಲ್ಲ ಷರೀಫ್. ಒಂದು ಬಾರಿ ಹೋದರೆ ಗಂಡ ಹೆಂಡತಿ ಇಬ್ಬರ ಕೆನ್ನೆಗೂ ಹೊಡೆದು ಬಿಡೋಣ ಎನ್ನುವಷ್ಟು ಸಿಟ್ಟು ಬಂದಿದೆ. ನಮಗೆ ಅವರನ್ನು ನೋಡುವ ಆಸೆ ಇರುವುದಿಲ್ಲವೇ...ಮೊನ್ನೆ ಒಂದು ಕಾಗದ ಬರೆದಿದ್ದೇನೆ ನಿನ್ನ ಗೆಳೆಯ ಹೆಂಡತಿಯೊಂದಿಗೆ ಓಡಿ ಬರಬೇಕು...ಇಲ್ಲಿಯ ವರೆಗೆ ತಡೆಹಿಡಿದಿದ್ದ ಕೋಪವನ್ನೆಲ್ಲಾ ಪತ್ರದಲ್ಲಿ ಬರಹದ ಮೂಲಕ ತೋರಿಸಿದ್ದೇನೆ...ಸಾಕಷ್ಟು ಹೀನಾಮಾನವಾಗಿಯೂ ಬೈದಿದ್ದೇನೆ....ಮನಸ್ಸು ತಡೆಯದೆ ಎಂದರು —'

ಎಂದ ಷರೀಫ್.

"ನನಗೆ ಒಂದೂ ಅಂತಹ ಕಾಗದ ತಲುಪಿಲ್ಲವಲ್ಲ ಷರೀಫ್"

"ಕಾರಣ ಗೊತ್ತೆ?"

"ನನಗೊಂದೂ ತಿಳಿಯದು"

"ರಜನಿ ಬೆಹನ್"

"ಅದು ಹೇಗಯ್ಯ?"

'ತಂದೆ ತಾಯಿ ಬರೆದ ಎಲ್ಲ ಪತ್ರಗ

(ಹನ್ನೊಂದನೇ ಪುಟ ನೋಡಿರಿ)

47ನೇ ವರ್ಷ

Telephone 226.

# ನವಯುಗ

ಪ್ರಮುಖ ಕನ್ನಡ ವಾರಪತ್ರಿಕೆ

ಉಡುಪಿ, ದ. ಕನ್ನಡ.

ಸ್ಥಾಪನೆ: 1921

ಸ್ಥಾಪಕರು

ದಿ। ಎ. ಬಿ. ಶೆಟ್ಟರು.

ಸಂಚಾಲಕ—ಸಂಪಾದಕ

ಕೆ. ಹೊನ್ನಯ್ಯ ಶೆಟ್ಟಿ

ವಾರ್ಷಿಕ ಚಂದಾ:

ಮೂರು ವಿಶೇಷ ಸಂಚಿಕೆಗಳು ಸೇರಿ ಅಂಚೆ ವೆಚ್ಚ ಸಹಿತ ಮುಂಗಡ

ಸ್ವದೇಶ ರೂ. ೧೦

ವಿದೇಶ ರೂ. ೧೮

ಜಾಹೀರಾತು ದರಗಳು:

ಅನಿಯಮಿತ (ಕೆಜುವಲ್)

ಕಲಂ ಸೆಂಟಿಮೀಟರಿಗೆ ರೂ. 2-00

ನಿಯಮಿತ (ಕಂಟ್ರಾಕ್ಟ್)

ಕಲಂ ಸೆಂಟಿಮೀಟರಿಗೆ ರೂ. 1-50


## ಸೂಚನೆಗಳು

ಲೇಖಕ ಬಂಧುಗಳಿಗೆ

ಲೇಖನವು ಕಿರಿದಾಗಿದ್ದು ಹಿರಿದರ್ಥದಿಂದ ಕೂಡಿರಬೇಕು. ಕಾಲು ತಾವಿನ ಪ್ರಮಾಣದ ಹಾಳೆಯ ಒಂದೇ ಮಗ್ಗುಲಲ್ಲಿ ಬದಿಯಿಂಬುಗಳನ್ನು ಬಿಟ್ಟು ಸುಸ್ಪಷ್ಟವಾದ ಅಕ್ಷರಗಳಿಂದ ಬರೆಯಲ್ಪಡಬೇಕು. ಆಧಾರಿತ, ಅನುವಾದಿತವಾದರೆ ಅವುಗಳ ಮೂಲವನ್ನೂ ತಿಳಿಸಬೇಕು.

ಚಂದಾದಾರರಿಗೆ –

ಚಂದಾಹಣವನ್ನಾಗಲೀ ಜಾಹೀರಾತಿನ ಮೊಬಲಗನ್ನಾಗಲೀ ಸಿಂಡಿಕೇಟ್ ಬೇಂಕಿನ ಯಾವುದೇ ಶಾಖೆಯಲ್ಲಿ ಯಾವ ಖರ್ಚೂ ಇಲ್ಲದ 'ನವಯುಗ'ದ ಖಾತೆಗೆ ಜಮೆ ಮಾಡುವ ಸೌಕರ್ಯವಿರುವುದು.

ಮುಖಪತ್ರದಲ್ಲಿ:



ಶ್ರೀ ಸಾಮಾನ್ಯನ ನೈಜ ಪ್ರತಿನಿಧಿ ಮಹಾತ್ಮಾ ಗಾಂಧಿ


# ನವಯುಗ

| ಸಂಪುಟ ೪೭ | ಉಡುಪಿ | Vol. 47 |
|---|---|---|
| ಸಂಚಿಕೆ ೪ | ೨೮—೯—೧೯೬೭ | No. 4 |


## ಕೆಂಪು ಕುತ್ತ

ಚುನಾವಣೆಯ ಪ್ರಚಾರ ಕಾಲದಲ್ಲಿ ವಿರೋಧಿ ಪಕ್ಷಗಳು ಕಾಂಗ್ರೆಸ್ಸನ್ನು ಪತಿತಗೊಳಿಸುವುದನ್ನೇ ತಮ್ಮ ಏಕಮೇವ ಉದ್ದೇಶವಾಗಿಟ್ಟುಕೊಂಡಿದ್ದುವು. ಒಂದೆರಡು ರಾಜ್ಯಗಳಲ್ಲಿ ಚುನಾವಣೆಗೆ ಮೊದಲೇ ಸಂಯುಕ್ತ ರಂಗಗಳನ್ನು ಕಟ್ಟಿ ಕಾಂಗ್ರೆಸ್ಸಿಗೆ ಪಂಥಾಹ್ವಾನವನ್ನೂ ನೀಡಿದುವು. ಯಾವುದೇ ಪಕ್ಷವು ಬಹುಮತಗಳಿಸದೆ ಹೋದರೆ, ಮುಂದೆ ರಾಜಕೀಯ ಅಸ್ಥಿರತೆಗೆ ನಾಂದಿಯಾಗಬಹುದು ಎಂಬ ಭೀತಿ ಕೆಲವರಲ್ಲಿತ್ತು; ವಿವಿಧ ರಾಜಕೀಯ ಪಕ್ಷಗಳು ಒಂದಾಗಿ ಸಮ್ಮಿಶ್ರ ಸರಕಾರ ರಚಿಸಿಕೊಂಡರೂ, ಪಕ್ಷ— ಪಕ್ಷಗಳ ಭಿನ್ನ ಧ್ಯೇಯಗಳಿಂದಾಗಿ ಕಚ್ಚಾಟ ತಪ್ಪಿದ್ದಲ್ಲವೆಂಬ ಅಭಿಪ್ರಾಯವೂ ವ್ಯಕ್ತವಾಗಿತ್ತು. ಆದರೆ, ಬುದ್ಧಿಜೀವಿಗಳಲ್ಲಿ ಅಗ್ರಗಣ್ಯರಾದ ಮಾಜಿ ಗವರ್ನರ-ಜನರಲ್ ಚಕ್ರವರ್ತಿ ರಾಜಗೋಪಾಲಾಚಾರಿಯವರು ಈ ಬಗ್ಗೆ ಈಗ ತಲೆಕೆಡಿಸಿಕೊಳ್ಳಬೇಕಾಗಿಲ್ಲವೆಂದೂ ರಾಜ್ಯಪಾಲರು ರಾಷ್ಟ್ರಪತಿಗಳು ನೋಡಿಕೊಳ್ಳುತ್ತಾರೆಂದೂ, ಜನತೆ ಕಾಂಗ್ರೆಸ್ಸನ್ನು ಪದಚ್ಯುತಗೊಳಿಸಬೇಕೆಂದೂ ಉದ್ಘೋಷಿಸಿದ್ದರು.

ನಾಲ್ಕನೆಯ ಚುನಾವಣಾ ನಂತರ ಕೆಲವು ರಾಜ್ಯಗಳಲ್ಲಿ 'ಸಂಯುಕ್ತದಳ"ಗಳ ಸರಕಾರ ರಚನೆಯಾಯಿತು. ಇನ್ನು ಕೆಲವೆಡೆ ಮೊದಲು ಕಾಂಗ್ರೆಸ್ಸು ಬಹುಮತ ಪಡೆದಿದ್ದರೂ 'ಅಧಿಕಾರ'ದ ಮೋಹದಿಂದ ಪಕ್ಷತ್ಯಾಗಕ್ಕೆ ಶರಣು ಹೋದವರಿಂದಾಗಿ, ಅದುವಿರೋಧಿಪಕ್ಷವಾಗಿ ಉಳಿಯಬೇಕಾಯಿತು. ಇನ್ನುಕೆಲವೆಡೆಕಾಂಗ್ರೆಸ್ಸು ನಿಚ್ಚಳ ಬಹುಮತವನ್ನು ಗಳಿಸಿತು. ಸಂಯುಕ್ತ ದಳಗಳು ಅಧಿಕಾರವನ್ನು ನಿರ್ವಹಿಸಲು ತೊಡಗಿ ಆರು ತಿಂಗಳುಗಳು ಕಳೆದುವು. ಈ ಅವಧಿಯ ಸಾಧನೆಯ ಬಗ್ಗೆ ಕಾಂಗ್ರೆಸ್ ಪಕ್ಷೀಯರ ಟೀಕೆ-ಟಿಪ್ಪಣಿಗಳು ಏನೇ ಇರಲಿ, ದಳದ ನಾಯಕರಲ್ಲಿ, ವಿವಿಧ ಪಕ್ಷಗಳ ನಾಯಕರಲ್ಲಿ ಒಮ್ಮತವೆಂಬುದಿಲ್ಲ. ಅಂತೂ ಕುರುಡನೂ ಕುಂಟನೂ ಒಂದಾಗಿ ಇನ್ನೂ ಕೆಲಕಾಲ ಮುಂದುವರಿಯಬಹುದು; ಆದರೆ, ಪಶ್ಚಿಮ ಬಂಗಾಲ ಮತ್ತು ಕೇರಳದ ಸಂಯುಕ್ತ ರಂಗದ ಪಕ್ಷಗಳು ಪರಸ್ಪರ ದ್ವೇಷಾಸೂಯೆಯ ಉರಿಯನ್ನು ಕಾರತೊಡಗಿವೆ. ಇದಕ್ಕಿರುವ ಮುಖ್ಯ ಕಾರಣವೆಂದರೆ, ಅಲ್ಲಿನ ಸಂಯುಕ್ತ ದಳಗಳಲ್ಲಿ ಕಮ್ಯುನಿಸ್ಟರ ಸಂಖ್ಯೆ ಗಣನೀಯವಾಗಿರುವುದೇ ಆಗಿದೆ. ಕಮ್ಯುನಿಸ್ಟರು ಆರಂಭದಿಂದಲೂ ಹಿಂಸಾಪ್ರಿಯರು. ಪರರನ್ನು ಹಿಂಸಿಸಿಯೇ 'ಶ್ರಮಿಕ ವರ್ಗ'ದ ಯೋಗಕ್ಷೇಮವನ್ನು ನೋಡಿಕೊಳ್ಳುವ ಪರಿಪಾಟವುಳ್ಳವರ್ರುಕೈಗೆ ಅಧಿಕಾರ ಸಿಕ್ಕೊಡನೆಯೇ ಅದನ್ನು ಬಲಪಡಿಸಿ, ಅದರ ಆಶ್ರಯದಲ್ಲೇ ಅರಾಜಕತೆಯ ಬೀಜ ಬಿತ್ತುವುದರಲ್ಲಿ, ತನ್ಮೂಲಕ ಜನತೆಯ ಮನಸ್ಸಿನಲ್ಲಿ ಕ್ರಾಂತಿಯ ಜ್ವಾಲೆ ಹುಟ್ಟಿಸುವುದರಲ್ಲಿ ತನ್ಮಯರಾಗುತ್ತಾರೆ. ಪಶ್ಚಿಮ ಬಂಗಾಳ, ಕೇರಳಗಳ ಸಂಯುಕ್ತ ಸರಕಾರಗಳು ಇದಕ್ಕೆ ಅಪವಾದವೆನ್ನುವಂತಿಲ್ಲ, ಪಶ್ಚಿಮಬಂಗಾಳಸರಕಾರವು ಅಜಯ ಮುಖರ್ಜಿಯವರ ನಾಯಕತ್ವದಲ್ಲಿರುವುದಾದರೂ ನಾಯಕತ್ವ ನುಂಗಲಾರದ ತುತ್ತು ಅವರಿಗೆ. ಧ್ಯೇಯ—ನೀತಿ ರೂಪಿಸುವಲ್ಲಿ ಅವರ ಮಾತಿಗೆ ಬೆಲೆಯೇ ಇಲ್ಲವೆಂಬಂತಾಗಿದೆ. 'ನಕ್ಸಲ್‌ಬಾರಿ'ಯ ಹಿಂಸಾಕೃತ್ಯಗಳನ್ನು ತಡೆಗಟ್ಟಲು ಅವರು ಮೀನಮೇಷವೆಣಿಸಬೇಕಾಯಿತು. ಇತ್ತೀಚೆಗೆ ಮಂತ್ರಿಮಂಡಳದ ಸದಸ್ಯರ ಧರಣಿ, ಬಂಗಾಳ ಬಂದ್—ಮೊದಲಾದುವುಗಳಲ್ಲಿಯೂ ಕಮ್ಯುನಿಸ್ಟರ ಒತ್ತಾಯವೇ ಹೆಚ್ಚಾಗಿದೆಯೆಂದು ತಿಳಿಯುತ್ತದೆ. ಗಡಿರಾಜ್ಯಗಳಲ್ಲಿ ಒಂದಾದ ಬಂಗಾಳದಲ್ಲಿ ಕಮ್ಯುನಿಸ್ಟ್ ಪರ ಕರಪತ್ರಗಳ ಪ್ರಚಾರವೂ ನಡೆಯುತ್ತಿದೆಯೆಂದೂ ಕೆಂಪು ಚೀನೀಯರ ಹಸ್ತಕರು ಇಲ್ಲಿದ್ದಾರೆಂದೂ ಅಂಥವರ ಮೇಲೆ ತೀವ್ರ ಕ್ರಮ ಕೈಕೊಳ್ಳಲು ಸರಕಾರದ ಕಮ್ಯುನಿಸ್ಟ ಸದಸ್ಯರು ಅಡ್ಡ ಬರುತಿದ್ದಾರೆಂದೂ ಹೇಳಲಾಗುತ್ತಿದೆ. ೧೯೬೨ರಲ್ಲಿ ಚೀಣಾದ ಆಕ್ರಮಣದ ವೇಳೆಯೂ ಇದೇ ಬಗೆಯ ಕರಪತ್ರಗಳು ನೇಫಾ, ಬಂಗಾಳಗಳಲ್ಲಿ ಹಂಚಲಾಗಿದ್ದುವು. ರಾಜ್ಯ ಸರಕಾರದ ಕುಂದು—ಕೊರತೆಗಳನ್ನು ಅಸಹಾಯಕತೆಯನ್ನು ಮರೆಮಾಚಿ ಕೇಂದ್ರ ಸರಕಾರವನ್ನು ಬೊಟ್ಟುಮಾಡಿ ತೋರಿಸುವ ಚಪಲತೆಯು ರಾಜ್ಯದಲ್ಲಿ ಅರಾಜಕತೆಯನ್ನು ಹರಡಿಸುವ ಸಾಧನಗಳಲ್ಲಿ ಒಂದು. ಇದನ್ನೆಲ್ಲಾ ಗಮನಿಸಿದ ಅಜಯ ಮುಖರ್ಜಿಯವರು ಮುಳ್ಳಿನ ಕಿರೀಟವನ್ನು ಹೊತ್ತಿರುವುದು ಮಾತ್ರವಲ್ಲ, ಮುಳ್ಳಿನ ಚಪ್ಪಲಿಯನ್ನೂ ಮೆಟ್ಟುತ್ತಿರುವ ಅನುಭವ ಪಡೆಯುತ್ತಿದ್ದಾರೆ. ಇದೀಗ ಅಲ್ಲಿನ ಸಂಯುಕ್ತ ರಂಗವು ಕಮ್ಯುನಿಸ್ಟರನ್ನು ಹೊರ ದೂಡಿ ಹೊಸ ಸರಕಾರ ರಚಿಸುವ ಆಲೋಚನೆಯಲ್ಲಿದ್ದಾರೆಂದೂ ಕಾಂಗ್ರೆಸ್ಸು ಸರಕಾರದಲ್ಲಿ ಸೇರುವುದಿಲ್ಲವಾದರೂ ತನ್ನ ನೀತಿ-ನಿಯಮಗಳಿಗೊಳಪಟ್ಟು ಬೆಂಬಲ ನೀಡುವುದೆಂದೂ ತಿಳಿಯುತ್ತದೆ. ಭಾರತದ ಮಣ್ಣಿನಲ್ಲಿ ಕಮ್ಯುನಿಜಂ ಬೀಜ ಮೊಳಕೆ ಬರುವುದಿಲ್ಲವೆಂಬುದನ್ನು ನಾವಿದರಿಂದ ಅರಿಯಬಾರದೆ?

ಕೇರಳದಲ್ಲಿ ಪರಸ್ಪರ ದೋಷಾರೋಪಣೆಯನ್ನು ಮಂತ್ರಿಗಳೇ ಮಾಡತೊಡಗಿದ್ದಾರೆ. ಆದರೆ, ನಂಬೂದರಿಪಾದರ ಕಮ್ಯುನಿಸ್ಟ ಪಕ್ಷವೊಂದೇ ಅಧಿಕ ಸಂಖ್ಯಾಕ ಪಕ್ಷವಾದುದರಿಂದ ಅವರ ಕೈಯಿಂದ ಸೂತ್ರ ಜಾರದು. ಆದರೆ, ಸರಕಾರವೇ ಕರೆನೀಡಿ ಆಚರಿಸಿದ 'ಬಂದ್' ತನ್ಮೂಲಕ ರಾಜ್ಯದಲ್ಲಿ ಉದ್ಭವಿಸಿದ ಅರಾಜಕತೆ —ಅಶಾಂತಿಗಳನ್ನು ರಾಜ್ಯಪಾಲರು ಕಟುವಾಗಿ ಪರಿಗಣಿಸಿದ್ದಾರೆ. 'ಓಣಂ'ಗೆ ಹೆಚ್ಚು ಅಕ್ಕಿ ಕೊಡಲಿಲ್ಲವೆಂಬುದಕ್ಕಾಗಿ, ಕೇಂದ್ರವನ್ನು ಪ್ರತಿಭಟಿಸುವ ಯೋಜನೆಯೇ ಈ 'ಬಂದ್' ರಾಜ್ಯದಲ್ಲಿ ಆಹಾರೋತ್ಪಾದನೆಯನ್ನು ಹೆಚ್ಚಿಸುವಲ್ಲಿ ಕೇರಳ ಸರಕಾರ ಯಾವ ಕ್ರಮವನ್ನೂ ಕೈಕೊಂಡಿಲ್ಲ. 'ಬಂದ್' ಧರಣಿ, ಮುಷ್ಕರ, ಸಂಪು—ಮೊದಲಾದುವುಗಳಿಂದ ಅಧಿಕ ಆಹಾರೋತ್ಪಾದನೆಯಾಗುವುದಾದರೆ, ನಿಶ್ಚಯವೂ ಇವಕ್ಕೆ ಅವಕಾಶ ಮಾಡಿಕೊಡಬಹುದು. ಜನತೆಯ ಭಾವನೆಯೇನೇ ಇದ್ದರೂ, ಅದನ್ನು ಸರಕಾರ ಅರಿತು ಪರಿಹಾರ ಕ್ರಮವರಸ ಬೇಕಲ್ಲದೆ, ಅದನ್ನು ಮತ್ತಷ್ಟು ಕೆರಳಿಸುವುದುರಾಜ್ಯ ಸರಕಾರದ ಕೆಲಸವಲ್ಲ. 'ಕೇರಳಬಂದ್'ನಿಂದ ಸಾಧಿಸಿದ್ದೇನು? ಹೆಚ್ಚಿನ ಅಕ್ಕಿಯಂತೂ ಆಕಾಶದಿಂದ ಸುರಿಯಲಿಲ್ಲ; ಅದಿಲ್ಲದೇನೇ ಓಣಂ ಆಚರಿಸಲಾಯ್ತು; ರಾಜ್ಯದ ಒಂದು ದಿನದ ಉತ್ಪಾದನೆಗೆ ಖೋತವಾಯಿತು. ಇದರಿಂದ ದೇಶಕ್ಕೆ ನಷ್ಟ. ಇದನ್ನೇ ಕಮ್ಯುನಿಸ್ಟರ ಗತ್ತುಗಾರಿಕೆಯೆನ್ನಬಹುದೆ? ಅರಾಜಕತೆಗೆ ನಾಂದಿಯೆನ್ನಬಹುದೆ?

## ವಚನಸುಧೆ

ಬುದ್ಧ್ಯಾ ಭಯಂ ಪ್ರಣುದತಿ
ತಪಸಾ ವಿಂದತೇ ಮಹತ್ ।
ಗುರುಶುಶ್ರೂಷಯಾಜ್ಞಾನಂ
ಶಾಂತಿಂ ಯೋಗೇನ ವಿಂದತಿ॥

ಮನುಷ್ಯನು ಬುದ್ಧಿಯಿಂದ ಭಯವನ್ನು ದೂರ ಮಾಡಬಲ್ಲನು, ತಪಸ್ಸಿನಿಂದ ಮಹತ್ವದ ಹೊಂದುತ್ತಾನೆ; ಗುರುಸೇವೆಯಿಂದ ಜ್ಞಾನವನ್ನೂ ಯೋಗದಿಂದ ಶಾಂತಿಯನ್ನೂ ಪಡೆಯುತ್ತಾನೆ.

## ರಾಜ್ಯದ ಭಾಷೆ

ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿ ಶ್ರೀ ವಿ. ಕೆ. ಗೋಕಾಕರು ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ಈಗಾಗಲೇ ಆರಂಭಗಾಗಿರುವ ಕನ್ನಡ ಮಾಧ್ಯಮವನ್ನು ಮುಂದಿನ ವರ್ಷ ಪ್ರಥಮ ವರ್ಷದ


(ಎಂಟನೇ ಪುಟ ನೋಡಿರಿ)


## ನರಸಣ್ಣನ ಸರಸ



'ಮಹಾಜನ ಆಯೋಗದ ವರದಿ ಪ್ರಕಟವಾಗದಿರುವಾಗ ಅದರ ರಹಸ್ಯಗಳನ್ನು ಬಯಲು ಮಾಡಿದ ಜ್ಯೋತಿಷಿಯಾರರ [illegible] ಶೆಟ್ಟಿ.'

### ಗೇಹ ರಾಜ್ಯದಲ್ಲಿ

# ಬೀಳುತ್ತಿರೋದು ಪ್ರೈಟ್ ಕ್ರೀನ್

"ಅಲ್ಲಾ, ಇದನ್ನೇ ವಿಧಿಯ ವೈಚಿತ್ರ್ಯ ಅನ್ನೋದು ಅಲ್ವೆ?'

"ಯಾವುದನ್ನೂಂತಂದೆ?"

"ನೋಡ್ರಿ, ಕಳೆದೆರಡು ವರ್ಷಗಳಿಂದ ಮಳೆ ನೆರೆ ನೋಡಿ ತಿಳಿಯದ ಬಿಹಾರಕ್ಕೆ ಈ ವರ್ಷ ಮಳೆಯೂ ಸುರೀತು; ನೆರೆಯೂ ಬಂತು....'

'ಹ್ಞಾಂ....ರಾಜ್ಯದ ಅನೇಕ ನಗರಗಳಿಗೆ ಪ್ರವಾಹದ ಭೀತಿ. ಮನೆಮಾರುಗಳೆಲ್ಲ ನೀರುಪಾಲು...."

"ಗಂಗಾದೇವಿ ಅಂದರೆ ಹಾಗೇನೇ ನೋಡಿ. ಒಲಿದರೆ ನಾರಿ, ಮುನಿದರೆ ಮಾರಿ...."

"ಹ್ಞಾಂ...ಸರೀನ್ನು. ಅದೇ ಶಂತನು ಚಕ್ರವರ್ತಿಯೊಬ್ಬನೇ ಸಾಕು ಇದಕ್ಕೆ ಉದಾಹರಣೆ."

'ನೀರು–ಬೆಂಕಿಯೊಡನೆ ಸರಸಾಟಸಲ್ಲ ಅಂದಿದ್ದಾರೆ ನೋಡಿ ಹಿರಿಯರು...."

"ಪಂಚಭೂತಗಳಲ್ಲಿ ಇವೆರಡಕ್ಕೇನು ಹೆಚ್ಚಿನ ಸ್ಥಾನಾಂತ..."

"ಏನೂ ಅಂದ್ರೆ...ಅದು ಹಾಗೆಯೇ."

"ಏಕೆ?"

"ನೀವೇ ಹೇಳಿ...."

"ಸೋತೇಂತ ಹೇಳು...'

."ಅಯ್ತಪ್ಪ...."

"ಊ ಹ್ಞಾಂ........ಸರಿಯಾಗೇ ಹೇಳು..."

"ಸರಿಯಾಗೇ ಸೋತೆ...."

"ಹ್ಞಾಂ, ನೋಡು, ಮನುಷ್ಯನ ತಲೆ ಯಾಕೆ ದೇಹದ ಮೇಲಿರೋದು, ಅದಕ್ಕೆ....'

"ಒಳ್ಳೆ ಕತೆಯಾಯ್ತಲ್ಲ ಇದು..."

"ಏನು?"

"ಏನೂ ಇಲ್ಲ. ನೋಡಿ, ಸ್ವರ್ಣ ಸಿಂಗರು ರಶ್ಯಾದಿಂದ ಹಿಂದೆ ಬಂದರಂತೆ...'

"ಏನು ತಂದರಂತೆ?'

"ಮತ್ತೇನೂ ತಾರದಿದ್ರೂ ಸೋವಿಯತ್‌ನ ವಿಶಾಲ ಜನ ಸಮೂಹದ ಶುಭ ಕಾಮನೆಯನ್ನಂತೂ ತಂದ್ರಲ್ಲಾ...ಅಲ್ರಿ, ಚೀನಾ ದಾಳಿಯು ಆರಂಭದಾಗಿನ, ಅಧ್ಯಕ್ಷ ಅಯ್ಯೂಬಖಾನರು ಮೋಸ್ಕೋವಿಗೆ ತೆರಳುವ ಮುಂಜಾವದಲ್ಲಿ ಸಂಯುಕ್ತ ರಾಷ್ಟ್ರ ಸಂಘದ ಸಾಮಾನ್ಯಾಧಿವೇಶನಕ್ಕೆ ಪೂರ್ವಭಾವಿಯಾದ ಈ ಸಂದರ್ಶನ ಮಹತ್ವಪೂರ್ಣವೆಂದಿತ್ತಲ್ಲಾ....'

"ಈಗ ಯಾರು ಅಲ್ಲಾಂತಂದವ್ರು?"

'ಯಾರು ಯಾಕೆ ಅನ್ಬೇಕು? ಅವ್ರೇನು ಸಾಧಿಸಿಕೊಂಡು ಬಂದ್ರೂಂತ...."

'ಸಾಧಿಸಿಕೊಂಡು ಬರೋಕೆ ಅದೇನು ವ್ಯಾಪಾರಾನೆ? ಕೆಂಪು ಚೀನಾದ ತಂಟೆ ಸೋವಿಯತ್ತಿನೊಂದಿಗೂ ಇದೆ ನೋಡು, ಆದುದರಿಂದ ಅದ್ರ ಬಗ್ಗೆ ಪರಸ್ಪರ ವಿಚಾರ ವಿನಿಮಯವಾಗಿರಲೇಬೇಕು; ತಾಷ್ಕೆಂಟ್ ಘೋಷಣೆಗೆ ಭಾರತ ಬದ್ಧವಾಗಿಯೇ ಇದೆ ಎಂಬ ಘೋಷಣೆ ಅಯ್ಯೂ...ಗಾಗಿ, ವಿಯತನಾಮದ ಯುದ್ಧ ವಿ...ದರ ಸ್ವಪ್ನ ಮಾತ್ರವೆಂಬುದು ಯುನೋವಿಗೆ. ಇನ್ನು ಉಭಯ ಕಶ ಲೋಪರಿ—ಸಾಲದೇ? ಅಂತಾರಾಷ್ಟ್ರೀಯ ರಾಜಕಾರಣದಲ್ಲಿ ಇಂತಹ ಭೆಟ್ಟಿಗಳು ಕೆಲವೊಮ್ಮೆ ನೆರವಾಗುವುದುಂಟು...'

'ಏನು ರಾಜಕಾರಣವೋ ಅದು — ಅಲ್ರಿ, ಮುರಾರ್ಜಿಯವರು ಅಮೆರಿಕಾ—ಕೆನೆಡಾಗಳಲ್ಲಿ ಭಾರಿ ದಿಗ್ವಿಜಯ ಸಾಧಿಸಿದ್ದಾರಂತೆ.'

"ಎಂಥ ದಿಗ್ವಿಜಯ? ಬಯಲಾಟದ ದಿಗ್ವಿಜಯವೆ?'

"ಅಲ್ರಿ, ನಾನು ಏನಾದ್ರೂ ಅಂದ್ರೆ ನಿಮ್ಗೆ ತಮಾಷೇನೇ....'

'ಮತ್ತೆ ನೀನು ಅನ್ನೋದಾದ್ರೂ ಏನು? ಮುರಾರ್ಜಿ ಭಾಯಿ ದೇಶದ ಸಂಕಟದ ಕತೆ—ಆದರೂ ಆದರ ನಿರ್ಧಾರದ ಹೆಜ್ಜೆ ಮೊದಲಾದುವನ್ನು ತಿಳಿಸಿ ಬಿಡಿಸಿ ಹೇಳಿದ್ದರಿಂದ ಕೆಲವೊಂದು ತಪ್ಪು ಭಾವನೆಗಳು ದೂರವಾಗುವ ಸಂಭವವಿದೆ.'

"ಮತ್ತೆ ಎಂಥದೋ ಶೇಕ ಅಬ್ದುಲ್ಲಾ ಅಯ್ಯೂಬಖಾನರ ನಡುವಿನ ಕಾಗದ ಪತ್ರಗಳೋ ಏನೋ...."

"ಹ್ಞಾಂ... ಪಾಕಿಸ್ತಾನದ ಪಿತೂರಿಯನ್ನು ಶೇಕ ಅಬ್ದುಲ್ಲಾರೇ ಒಪ್ಪಿಕೊಳ್ಳುತಿದ್ದಾರೆ. ಭಾರತ ಸರಕಾರ ಪಾಕಿಸ್ತಾನಿ ಕಾರಸ್ಥಾನ–ಕುಟಿಲ ನೀತಿಯನ್ನು ಬೆಳಕಿಗೆ ತರುವಲ್ಲಿ ಯಶ ಗಳಿಸಿದೆ. ಎಂತಲೇ ಅಯ್ಯೂಬರ ವಾದ ನಡುಗತೊಡಗಿದೆ...."

"ಏನಾದ್ರೂ ಕಾಶ್ಮೀರದ ಮೋಹ ಬಿಡೋಲ್ಲ ತಾನೆ?"

'ಅದ್ಯಾಕೆ ಬಿಟ್ಟಾರು? ಅದು ಬಿಟ್ಬಿಟ್ರೆ ಮತ್ತೆ ಅದು ಬದುಕೋದು ಹ್ಯಾಗೆ?"

"ನೋಡಿ, ನಮ್ಮ ಪ್ರಧಾನ ಮಂತ್ರಿ ಸಿಂಹಳ ಸಂದರ್ಶನ ಮಾಡಿ ಬಂದ್ರು. ಅಲ್ಲ, ಇಡಿಯ ಸಿಂಹಳದಲ್ಲಿ ಆಕೆಗೆ ಎಂಥ ಸ್ವಾಗತಾಂತಂದ್ರೆ....

"ಹ್ಞಾಂ.......ಸರೀನ್ನು. ಎಷ್ಟಾದ್ರೂ ಪ್ರಪಂಚಕ್ಕೆ ಮೊತ್ತಮೊದಲು ಮಹಿಳಾ ಪ್ರಧಾನಿಯನ್ನು ನೀಡಿದ ದೇಶ ಸಿಂಹಳ–ಆ ಪರಂಪರೆಯನ್ನು ಮುಂದುವರಿಸಿದ್ದು ಭಾರತ...."

"ಸರಿ ಹೋಯ್ತು........ಮಹಿಳೆ ಅಂದ ಮಾತ್ರಕ್ಕೆ....'

"ಹ್ಞಾಂ ಕಣೇ. ನೋಡು, ಮೊನ್ನೆ ಮೊನ್ನೆ ಮುಂಬಯಿಯಲ್ಲಿ ಒಬ್ಬಾಕೆ ಪುರುಷ ವೇಷಧಾರಿ ಕಳ್ಳತನ ಪ್ರವೀಣೆಯಾದ ಮಹಿಳೆಯನ್ನು ಸೆರೆ ಹಿಡಿದರಂತೆ....'

'ಛಿ, ಏನಂತೀರಾ ನೀವು?'

"ಇದು ಸುಳ್ಳಲ್ಲ ಕಣೆ..."

"ಹ್ಞಾಂ....ಅಲ್ಲಿಗೆ ನಿಜವಾದ ನಾಗರಿಕತೆ ಬಂದಂತಾಯ್ತು. ಇಷ್ಟೂ ಮುಂದುವರಿಯುವುದೆಂದರೆ...."

"ಕೆಲವರು ನಮ್ಮ ಮಹಿಳಾ ತನವನ್ನು ಹೀಗೂ ಉಪಯೋಗಿಸುತ್ತಾರೆ....'

"ಹ್ಞಾಂ ನಾಚಿಗೆಗೇಡು...'

'ಯಾಕೆ? ಕಳ್ಳತನವೆಂಬುದು ಪುರುಷರಿಗೆ ಮಾತ್ರ ಮೀಸಲಾದ ವಿದ್ಯೆಯೇನು? ಆದೂ ಸಮಾನತೆಯ ಈ ಯುಗದಲ್ಲಿ...."

'ಕೆಟ್ಟು ಹೋಯ್ತು ಕಾಲ..."

"ಯಾಕೆ?"

'ಯಾಕೆ ಅಂದ್ರೆ? ನೋಡಿ, ಪ್ರಪಂಚದ ಸುಸಂಸ್ಕೃತ, ಸುಸಂಪನ್ನ ಜನತೆ ಪಶು ಸಮಾನವಾಗುತ್ತ ಇದೆಯಂತೆ...'

'ಅಂದ್ರೆ....?'

ಅಂದ್ರೆ ಎಂದ್ರೆ ಎಂಥದು? ಮದುವೆಯಾಗದೆ ತಾಯಿಯಾಗುತ್ತಿರುವವರ ಸಂಖ್ಯೆ ದಿನದಿಂದ ದಿನಕ್ಕೆ ಬೆಳೆಯುತ್ತಿದೆಯಂತೆ ಅಮೆರಿಕೆಯಲ್ಲಿ!

'ಹ್ಞಾಂ, ಅಲ್ಲಿನ ಸಂಸ್ಕೃತಿ ಅಂಥಾದ್ದು. ಗಂಡು–ಹೆಣ್ಣು ಕೈಕೈಹಿಡಿದು ಸರ್ತಿಸಿ ಆಲಂಗಿಸಿ ಲೈಂಗಿಕ ತೃಷೆಯನ್ನು ತೀರಿಸಿಕೊಳ್ಳಬಲ್ಲಂತಹ ಸಂತೋಷ ಕೂಟಗಳು ನಡೆಯುತ್ತಲೇ ಇರುತ್ತವೆ. ಇದನ್ನು ವಿರೋಧಿಸುವುದು ಅವರ ಸಾಮಾಜಿಕ ಕಟ್ಟಳೆಗಳಿಗೆ ವಿರೋಧ....'

'ಎಂಥದ್ರಿ ಇದು? ನೈತಿಕ ಅಪಮೌಲ್ಯ, ಪಾಶವಿಕ ವರ್ತನೆ, ಅದ್ರ ಮೇಲೆ ದಾಂಪತ್ಯದಲ್ಲಿ ವಿರಸ..."

'ಪರಿಹಾರವಿದೆಯಲ್ಲಾ ಡೈವರ್ಸ್...'

'ಅದೇ ಅಂದದ್ದು ನೋಡಿ, ಲೈಂಗಿಕ ಸ್ವೈರ ಅಂದ್ರೆ ಪಶು ಜೀವನಾಂತ ಅರ್ಥ. ಇಂತಹ ಪಶುಗಳನ್ನೂ ನಾವು ಸುಸಂಸ್ಕೃತರೂಂತ ಕರೆಯುವುದಾದ್ರೆ....'

"ಇದು ದೃಷ್ಟಿ ಭೇದ...."

"ಯಾಕೆ?'

"ಸಂಸ್ಕೃತಿಗೆ ಯಾವುದೇ ಪರಿಪೂರ್ಣ ಪರಿಭಾಷೆಯೆಂಬುದಿಲ್ಲ. ಒಂದು ಪರಿಭಾಷೆ ನಿರ್ಮಾಣವಾಗುವುದರೊಳಗೆ ಅದು ಅವುಟ್ ಆಫ್ ಫ್ಯಾಷನ್ ಆಗಿ ಬಿಡುತ್ತದೆ.'

"ಹ್ಞಾನ್ನಿ. ನಮ್ಮ ದೇಶದ ಕೆಲವು ರಾಜ್ಯ ಸರಕಾರಗಳ ಕತೆಯಂತೆ....'

"ಹ್ಞಾಂ....ಅಲ್ಲಿ ಲೈಂಗಿಕ ವ್ಯಭಿಚಾರವಾದ್ರೆ ಇಲ್ಲಿ ರಾಜಕೀಯ ವ್ಯಭಿಚಾರ....'

"ಮತ್ತೆಂಥದು? ನೋಡಿ, ಪಾಂಡಿಚೇರಿಯಲ್ಲಿ ಮತ್ತೊಮ್ಮೆ ಹಗರಣ ಆರಂಭವಾಗಿದೆಯಂತೆ..."

'ಮಣಿಪುರದಲ್ಲೂ "ಚರಣ ಸಿಂಗ"ರ ಅವತಾರವಾಗಿದೆ."

"ಅಲ್ರಿ. ನೋಡಿ, ಸೇನೆಯಲ್ಲಿ ಕಮ್ಯುನಿಸ್ಟರು ಸೇರಿಕೊಳ್ಳದಂತೆ ನೋಡಿಕೊಳ್ಳಬೇಕೆಂದು ಎಚ್ಚರಿಕೆ ನೀಡಲಾಗಿದೆಯಂತಲ್ಲಾ....'

"ನಿಜಾನ್ನಿ. ಕಮ್ಯುನಿಸ್ಟ ಚೀನಾದೊಂದಿಗೆ ನಮ್ಮ ಕಮ್ಯುನಿಸ್ಟ್ ಪಾರ್ಟಿ ಕೈಮಿಲಾಯಿಸಲು ಸಿದ್ಧವಿರುವಾಗ...."

"ಅದು ಹೌದೂನ್ನಿ. ಪಶ್ಚಿಮ ಬಂಗಾಲವನ್ನು ನೋಡಿದ್ರೆ ತಿಳಿಯೋದಿಲ್ವೆ? ಕಾನೂನೂ ಇಲ್ಲ, ಸುವ್ಯವಸ್ಥೆಯೂ ಇಲ್ಲ. ಒಂದಕ್ಕೂ ಎರಡಕ್ಕೂ 'ಘೇರಾವೋ'!"

'ಅದಕ್ಕೇ ನೋಡು, ಕಮ್ಯುನಿಸ್ಟರನ್ನು ಹೊರಗಿಟ್ಟು ಬೇರೆ ಸಚಿವ ಸಂಪುಟ ಅಧಿಕಾರಕ್ಕೆ ಬರುವ ಬಗ್ಗೆ ಊಹಾಪೋಹ ನಡೆಯುತ್ತಿದೆ..."

"ಅಲ್ಲಿ ಸಾಧ್ಯವಾಗಬಹುದು. ಆದರೆ ಮದ್ರಾಸದಲ್ಲಿ?'

"ಇದೆಯಲ್ಲಾ ಡಿಎಂಕೆ. ಶಿವಸೇನೆಯನ್ನು ವಿಸರ್ಜಿಸಬೇಕಾದ್ರೆ ಡಿಎಂಕೆಯನ್ನೂ ವಿಸರ್ಜಿಸಬೇಕು ಅಂತಾರೆ ಥ್ಯಾಕರೆ...."

"ಅಲ್ರಿ, ಇದು ಹೇಗೆ? ಡಿಎಂಕೆ ರಾಜಕೀಯ ಪಕ್ಷ....'

"ಅದು ಹುಟ್ಟಿದ್ದು ಬೇರೆ ರೀತಿಯಲ್ಲಿ."

"ಏನೇ ಆಗ್ಲಿ, ಅದ್ರ ಹಿಂದೀ ವಿರೋಧಿ ನೀತಿಯನ್ನು ನಾನು ಒಪ್ಪೋಲ್ಲ."

"ಬೇಡ. ಅಭಿಪ್ರಾಯ ಸ್ವಾತಂತ್ರ್ಯವಿದೆ ನೋಡು..."

"ಅಲ್ರಿ. ಕೆಲವು ಮುಂದಾಳುಗಳೆಲ್ಲಾ ಸೇರಿ ಇಂಗ್ಲಿಷ್ ಶಿಕ್ಷಣ ಮಾಧ್ಯಮ ಇರ್ಬೇಕೂಂತ ಹೇಳ್ತಾರಂತೆ.... ಕಲಿಯುವ ಎಳೆಯ ಮಕ್ಕಳ ಮೇಲೆ ಈ ಮುಂದಾಳುಗಳ ಬಲಾತ್ಕಾರವೇಕೆ? ತಮ್ಮ ಹಳೆಯ ಮಾನದಂಡದಲ್ಲೇ ಅಳೆಯುವ ಇವ್ರು ಸ್ವಲ್ಪ ಸುಮ್ಮಗಿರಬಾರದೆ? ನೋಡಿ ಬೆಂಗ್ಳೂರಲ್ಲಿ ಕನ್ನಡ ಮಾಧ್ಯಮ ತುಂಬ ಆಕರ್ಷಕವಾಗಿದೆ."

'ಆಗದೆ ಏನೆ? ಅವಕಾಶವಿದ್ದರೆ, ಆಕರ್ಷಕವಾಗಿಯೇ ಆಗುತ್ತೆ. ವಿಷಯ ಜ್ಞಾನ ಮಾತೃಭಾಷೆಯ ಮೂಲಕವೇ ಸಾಧ್ಯ. ತಾನು ತಿಳಿದದ್ದನ್ನು ಮಾತೃಭಾಷೆಯ ಮೂಲಕವೇ ಅದು ಸರಿಯಾಗಿ

(ಒಂಭತ್ತನೇ ಪುಟದಿಂದ)

---

**ಕುಟುಂಬ ಯೋಜನೆಗೆ ಅತ್ಯಂತ ಸಹಕಾರಿಯಾದ ಪುಸ್ತಕ—**

## ಮಿತ ಸಂತತಿ

ಜನನಗಳು ಹೆಚ್ಚದಂತೆ ಸಾಧಿಸುವ ವಿಚಾರ ಮತ್ತು ಉಪಾಯಗಳನ್ನು ವಿವರಿಸುವ ಕೈಪಿಡಿ

ಬೆಲೆ 0—50 ಪೈಸೆ ಮಾತ್ರ.

0–60 ಪೈಸೆ M. O. ಮಾಡಿ, ಯಾ ಸ್ಟಾಂಪು ಕಳಿಸಿ ಒಂದು ಪ್ರತಿಯನ್ನು ತರಿಸಿಕೊಳ್ಳಬಹುದು.

**ನವಭಾರತ ಪುಸ್ತಕ ಭಂಡಾರ**

ಪಾಲುಕೋಟಿ, ಉಡುಪಿ, ದ. ಕ.

---

**ಉಡ್ಪಿ ಮುನ್ಸಿಫ್ ಕೋರ್ಟಿನಲ್ಲಿ**

R. I. A. 413/67

O. S. No. 209/66

ಲೊರೆನ್ಸ ಇಮಾನುವೇಲ ಮಾಸ್ — ಅರ್ಜಿದಾರ

ಮತ್ತು

ಪದ್ದು ಪೂಜಾರಿ ಕೂಡಾ — ಎದ್ರಿರು

ಅರ್ಜಿದಾರನು ಫ್ಯಾನಲ್ ಡಿಕ್ರಿ ಬಗ್ಗೆ ದಾಖಲು ಮಾಡಿದ ಮೇಲಿನ ಅರ್ಜಿಯು ೨ರಿಂದ ೮ನೇವರೆಗಿನ ಎದ್ರಿಯರ ನೋಟೀಸಿನ ಬಗ್ಗೆ ತಾ. 30—9—67ಕ್ಕೆ ಇಟ್ಟಿದೆ. ಸದ್ರಿಯವರು ಸದ್ರಿ ತಾರೀಕಿನಲ್ಲಿ ಪೂರ್ವಾಹ್ನ ಘಂಟೆ 10ಕ್ಕೆ ಸದ್ರಿ ಅರ್ಜಿಯಲ್ಲಿ ಮೇಲ್ಕಂಡ ಕೋರ್ಟಿನ ಮುಂದೆ ಹಾಜರಾಗಲಿಕ್ಕೆ ತಪ್ಪಿದರೆ ಸದ್ರಿಯವರ ಗೈರು ಹಾಜ್ರಿಯಿಂದ ಸದ್ರಿ ಅರ್ಜಿ ತೀರ್ಮಾನಿಸಲ್ಪಡುವದು.

(Sd.) Gratian C. Rego
Vakil for Petitioner

ಉಡ್ಪಿ, ತಾ. 21—9—67

ಅಭಿಪ್ರಾಯ

# ಶಿಕ್ಷಣದ ಮಾಧ್ಯಮವು ರಾಜ್ಯಭಾಷೆಗಳಲ್ಲಿ!!

ಬರೆದವರು: ಕುಮಾರಿ ಮೀರಾ ಶೆಣೈ, ಬಿ. ಎ.

ಸ್ವಾತಂತ್ರ್ಯ ದೊರಕಿ ಇಪ್ಪತ್ತು ವರುಷಗಳು ಸಂದುವು. ಮೂರು ಪಂಚವಾರ್ಷಿಕ ಯೋಜನೆಗಳಾದುವು. ಆದರೂ ನಮ್ಮ ದೇಶದ ಅವನತಿಯ ಮಟ್ಟವು ಏರುತ್ತಾ ಇರುವುದು ತುಂಬಾ ಹಾಸ್ಯಾಸ್ಪದ, ಶೋಚನೀಯ. ಇದಕ್ಕೆ ಕಾರಣ ದೇಶದಲ್ಲಿ ಉದ್ಭವಿಸಿದ ಹಲವಾರು ಸಮಸ್ಯೆಗಳು. ಸಮಸ್ಯೆಗಳು ತಾನು ಮುಂದು ತಾನು ಮುಂದು ಎಂದು ತಿಕ್ಕಾಡುತ್ತಿವೆ. ದಿನದಿಂದ ದಿನಕ್ಕೆ ಕೈ ಮೀರುವ ಆಹಾರ ಸಮಸ್ಯೆ ಮತ್ತು ನಿರುದ್ಯೋಗ ಸಮಸ್ಯೆ; ಪ್ರತಿದಿನವೂ ತನ್ನ ಪೌರುಷವನ್ನು ತೋರಿಸುವ ವಸ್ತು ಸಾಮಗ್ರಿಗಳ ಬೆಲೆ; ಹಣದುಬ್ಬರ ರೂಪಾಯಿ ಅಪಮೌಲ್ಯ ಮತ್ತು ಅದರಿಂದ ಉಂಟಾದ ಹಲವಾರು ತೊಡಕುಗಳು; ನಾಗಾ, ಮಿಜೋ ಸಮಸ್ಯೆ; ನಿರಾಶ್ರಿತರ ಮತ್ತು ಪ್ರವಾಹ ಪೀಡಿತಜನರ ಸಮಸ್ಯೆ. ಅಲ್ಲಲ್ಲಿ ಆಗುವ ರಾಜಕೀಯ ಗಲಭೆಗಳು ಮತ್ತು ಮೊದಲಾದುವು ನಮ್ಮ ರಾಷ್ಟ್ರವನ್ನು ಮುತ್ತಿಕೊಂಡಿವೆ. ಎಲ್ಲವುಗಳಿಗೆ ಮುಖ್ಯವಾದುದು ಮತ್ತು ದೇಶದ ಉನ್ನತಿಗೆ ಕಂಟಕಪ್ರಾಯವಾದುದು ಆಹಾರಾಭಾವ ಮತ್ತು ಹೆಚ್ಚಾಗಿ ಬೆಳೆಯುವ ಜನಸಂಖ್ಯೆ. ಈಗ ನಮ್ಮ ದೇಶವು ಜನಸಂಖ್ಯೆಯಲ್ಲಿ ದ್ವಿತೀಯ ಸ್ಥಾನವನ್ನು ಗಳಿಸಿದೆ. ಆದ್ದರಿಂದ ಈಗ ಮೂರು ಜನರಲ್ಲಿ ಇರ್ವರಿಗೆ ಮಾತ್ರ ೧೪೦೦ ಕ್ಯಾಲೋರಿಯಷ್ಟು ಆಹಾರ ಒದಗಿಸಲು ನಮ್ಮ ದೇಶವು ಸಮರ್ಥವಾಗಿದೆ. ಆದರೆ ಇತ್ತೀಚೆಗೆ ಇಷ್ಟು ಆಹಾರ ಒದಗಿಸಲು ದೇಶವು ಅಸಮರ್ಥವಾಗಿದೆ. ಈ ಎಲ್ಲಾ ಸಮಸ್ಯೆಗಳನ್ನು ನೋಡಿದರೆ ಭಾರತವು ಸಮಸ್ಯೆಗಳ ನೆಲೆಬೀಡೋ ಅಥವಾ ತವರೂರೋ ಎಂದು ಭಾಸವಾಗುತ್ತಿದೆ.

ಇಷ್ಟೆಲ್ಲಾ ಸಮಸ್ಯೆಗಳು ನಮ್ಮ ಮುಂದಿದ್ದರೂ ಇತ್ತೀಚೆಗೆ ಶಿಕ್ಷಣದ ಮಾಧ್ಯಮಕ್ಕೆ ತುಂಬಾ ಬೆಲೆ ಕೊಡಲಾಗುತ್ತಿದೆ. ಜನರ ಹಿತಕ್ಕಾಗಿ, ದೇಶದ ಉನ್ನತಿಗಾಗಿ ಯಾವ ಸಮಸ್ಯೆಯನ್ನು ನಾವು ಮೊದಲು ದೂರೀಕರಿಸಬೇಕೆಂಬ ವಿವೇಚನೆಯಿಲ್ಲದೆ ಈಗ ಈ ಸಮಸ್ಯೆಯ ಧ್ವಜವನ್ನು ಎತ್ತಿ ಹಿಡಿಯಲಾಗುತ್ತಿದೆ. ಇನ್ನು ಐದು ವರುಷಗಳೊಳಗಾಗಿ ಪ್ರತಿಯೊಂದು ಪ್ರಾಂತ್ಯದ ಶಾಲಾ ಕಾಲೇಜುಗಳಲ್ಲಿ ಶಿಕ್ಷಣದ ಮಾಧ್ಯಮವು ತಮ್ಮ ತಮ್ಮ ಪ್ರಾದೇಶಿಕ ಭಾಷೆಗಳಲ್ಲಾಗಬೇಕೆಂದು ಕೆಲವರು ಒಟ್ಟಾಗಿ ನಿರ್ಣಯಿಸಿದ್ದಾರೆ.

ಶಿಕ್ಷಣದ ಮಾಧ್ಯಮವು ಪ್ರಾಂತೀಯ ಭಾಷೆಯಲ್ಲಾದರೆ ನಮಗೆ ಬಹು ಮಟ್ಟಿಗೆ ಹಾನಿ. ಈಗಾಗಲೇ ಭಾರತವು ಹಲವಾರು ರಾಜ್ಯಗಳಾಗಿ ವಿಭಜನೆಗೊಂಡುದರಿಂದ ಹಲವಾರು ಸಮಸ್ಯೆ, ಒಳ ಜಗಳಗಳು ಹುಟ್ಟಿಕೊಂಡಿವೆ. ಉದಾಹರಣೆಗಾಗಿ ಕೇವಲ ನದೀ ನೀರಿಗಾಗಿಯೇ ನಮ್ಮ ರಾಜ್ಯಗಳು ಕಚ್ಚಾಡುತ್ತಿವೆ. ಶಿವಸೇನೆ, ಬಸವಸೇನೆ ಮುಂತಾದುವುಗಳಿಗೆ ಜನ್ಮ ನೀಡುತ್ತಿವೆ. ಇನ್ನು ಪ್ರತಿಯೊಂದು ರಾಜ್ಯವು ತನ್ನ ರಾಜ್ಯ ಭಾಷೆಯನ್ನೇ ಶಾಲಾ ಕಾಲೇಜುಗಳಲ್ಲಿ ಶಿಕ್ಷಣದ ಮಾಧ್ಯಮವನ್ನಾಗಿ ಮಾಡಿದರೆ ಯಾವ ಸೇನೆ ಸಮಸ್ಯೆಗಳಿಗೆ ದಾರಿ ಮಾಡಿ ಕೊಡುತ್ತವೆಯೋ ಎಂದು ಕಾದು ನೋಡಬೇಕು.

ಶಿಕ್ಷಣ ಮಾಧ್ಯಮವು ಪ್ರಾದೇಶಿಕ ಭಾಷೆಯಾದರೆ ನಮಗೆ ಇಂಗ್ಲಿಷಿನ ಸಂಬಂಧವು ಹೆಚ್ಚಾಗಿ ಕಡಿದು ಹೋಗುವುದು. ಈ ಅಂತಾರಾಷ್ಟ್ರೀಯ ಭಾಷೆಯನ್ನು ಲಘುವಾಗಿ ತೆಗೆದುಕೊಳ್ಳುತ್ತಾರೆ. ಇದರಿಂದ ಪರದೇಶಗಳಿಗೆ ಹೋಗುವ ನಮ್ಮ ವಿದ್ಯಾರ್ಥಿಗಳಿಗೆ, ಅಧಿವೇಶನ ಮತ್ತು ಇತರ ಸಮಾರಂಭಕ್ಕೆ ಭಾಗವಹಿಸಲು ಹೋಗುವ ಮಹನೀಯರಿಗೆ, ರಾಯಭಾರಿ ಮುಂತಾದವರಿಗೆ ತುಂಬಾ ತೊಡಕಾಗುತ್ತದೆ.

ಇನ್ನು ಶಿಕ್ಷಕರಿಗಾಗುವ ತೊಂದರೆ— ಇದರಿಂದ ಶಿಕ್ಷಕರು ತುಂಬಾ ತೊಂದರೆಗೀಡಾಗುತ್ತಾರೆ. ಇದುವರೆಗೆ ಇಂಗ್ಲಿಷಿನಲ್ಲೇ ಕಲಿಸುತ್ತಿದ್ದ ಅಧ್ಯಾಪಕರು ಈಗ ಒಂದೇ ಸಾರಿ ರಾಜ್ಯ ಭಾಷೆಯಲ್ಲಿ ಕಲಿಸಬೇಕಾದರೆ ಎಷ್ಟು ಕಷ್ಟವಾದೀತೆಂದು ಅಧ್ಯಾಪಕರಿಗೆ ಗೊತ್ತು. ಉದಾಹರಣೆಗಾಗಿ—ಇಂಗ್ಲಿಷಿನ ಒಂದೇ ಒಂದು ಶಬ್ದಕ್ಕೆ ಕನ್ನಡದಲ್ಲಿ ಹಲವಾರು ಅರ್ಥಗಳಿವೆ, ಆದ್ದರಿಂದ ಅಧ್ಯಾಪಕರು ತಮ್ಮ ಪಾಠಗಳನ್ನು ಸರಿಯಾಗಿ ಮನನ ಮಾಡಿ ಅನಂತರ ಅದಕ್ಕೆ ಹೋಲುವ ಪದಗಳನ್ನು ಜೋಡಿಸಿಡಬೇಕಾಗುತ್ತದೆ. ಇದರಿಂದಾಗಿ ಅವರಿಗೆ ಆ ಬರೇ ಪುಸ್ತಕ ಮತ್ತು ಅರ್ಥ ಕೋಶದೊಡನೇ ಹೋರಾಡಬೇಕಾಗುವುದು. ಆದರೆ ಅನ್ಯ ಒಳ್ಳೇ ಬರಹಗಾರರ ಪುಸ್ತಕಗಳನ್ನು ಮನನ ಮಾಡಿ ಅದನ್ನು ತಮ್ಮ ವಿದ್ಯಾರ್ಥಿಗಳಿಗೆ ತಿಳಿಯ ಹೇಳಿ ತಮ್ಮ ಮತ್ತು ವಿದ್ಯಾರ್ಥಿಗಳ ಜ್ಞಾನ ವೃದ್ಧಿಸುವ ಸಾಧ್ಯತೆಯು ಕಡಿಮೆಯಾಗುತ್ತದೆ. ಇದರಿಂದಾಗಿ ಅವರಿಗೆ ತಮ್ಮ ವೃತ್ತಿಯಲ್ಲೇ ಬೇಸರ ಬಂದು ಅನ್ಯ ವೃತ್ತಿಗೆ ಸೇರಿದರೂ ಆಶ್ಚರ್ಯವೇನಿಲ್ಲ. ಇದು ಹೆಚ್ಚಾಗಿ ವಿಜ್ಞಾನ ಮತ್ತು ವೈದ್ಯಕೀಯ ಮುನ್ನಡೆಗೆ ತುಂಬಲಾರದ ನಷ್ಟವನ್ನು ತಂದೊಡ್ಡುವುದು. ದೇಶದ ಉನ್ನತಿಗೆ ಕಾರಣಭೂತವಾದ ಇವುಗಳಿಗೇನೇ ತೊಂದರೆಯಾದರೆ ಇನ್ನು ದೇಶದ ಉನ್ನತಿಯಾಗಬೇಕೆಂದು ಹೇಳಿದರೆ ಸಾಧ್ಯವೇ?

ಶಿಕ್ಷಣದ ಮಾಧ್ಯಮವು ರಾಜ್ಯ ಭಾಷೆಯಲ್ಲೇ ಆದರೆ ವಿದ್ಯಾರ್ಥಿಗಳೂ ತುಂಬಾ ತೊಂದರೆಗೀಡಾಗುವರು. ಈಗ ಇಂಗ್ಲಿಷಿನಂಶವನ್ನೇ ರಕ್ತಗತವನ್ನಾಗಿ ಮಾಡಿಕೊಂಡ ಅವರು ಇನ್ನು ಪ್ರತಿಯೊಂದು ಪಾಠವನ್ನೂ ಅನ್ಯ ಭಾಷೆಯಲ್ಲಿ ಕಲಿಯಲು ಸರ್ವಥಾ ಒಪ್ಪಲಾರರು. ಒಂದು ರಾಜ್ಯದ ವಿದ್ಯಾರ್ಥಿಗಳಿಗೆ ಇನ್ನೊಂದು ರಾಜ್ಯಗಳಿಗೆ ಹೋಗಿ ಕಲಿಯುವ ಅವಕಾಶವು ಕಡಿಮೆಯಾಗುವುದು, ಅಲ್ಲದೆ ಪರದೇಶಗಳಿಂದ ಇಲ್ಲಿ ಬಂದು ಕಲಿಯುವ ವಿದ್ಯಾರ್ಥಿಗಳ ಸಂಖ್ಯೆಯೂ ಸೊನ್ನೆಯಾಗಬಹುದು. ಈ ಒಂದು ವಿಷಯವನ್ನು ನಾವು ಪರಾಮರ್ಶಿಸಬಹುದು. ಉದಾಹರಣೆಯನ್ನು ತೆಗೆದುಕೊಳ್ಳುವುದಾದರೆ ನಮ್ಮ ಈ ಮೈಸೂರು ರಾಜ್ಯದಲ್ಲೇ ಇದ್ದ ಹಲವಾರು ಕಾಲೇಜುಗಳಲ್ಲಿ ಅನೇಕ ಕೇರಳದ ವಿದ್ಯಾರ್ಥಿಗಳನ್ನು ಕಾಣಬಹುದು. ಮೆಡಿಕಲ್ ಮತ್ತು ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಪರರಾಷ್ಟ್ರಗಳ ವಿದ್ಯಾರ್ಥಿಗಳೂ ಇದ್ದಾರೆ. ಅಂತಾರಾಷ್ಟ್ರೀಯ ಭಾಷೆಯಾದ ಇಂಗ್ಲಿಷ್ ಶಿಕ್ಷಣದ ಮಾಧ್ಯಮವಾದ್ದರಿಂದ ಇದು ಸಾಧ್ಯವಾಯಿತು. ಶಿಕ್ಷಣದ ಮಾಧ್ಯಮವು ಇಂಗ್ಲಿಷಿನ ಹೊರತಾದರೆ ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ಹೋಗಿ ತಮ್ಮ ಶಿಕ್ಷಣ ಮುಂದುವರಿಸಲು ವಿದ್ಯಾರ್ಥಿಗಳಿಗೆ ಸಾಧ್ಯವೂ ಇಲ್ಲ. ಅಲ್ಲದೆ ಬೇರೆ ದೇಶಗಳಿಂದ ನಮ್ಮ ದೇಶಕ್ಕೆ ವಿದ್ಯಾರ್ಥಿಗಳ ಆಗಮನವೂ ನಿಂತು ಹೋಗುವುದು.

ಬಹು ತೊಡಕಿನ ಕೆಡುಕೆಂದರೆ, ಒಂದು ರಾಜ್ಯದಿಂದ ಇನ್ನೊಂದು ರಾಜ್ಯದಲ್ಲಿ ಇದರಿಂದಾಗಿ ಕೆಲಸಕ್ಕೆ ಪ್ರಯತ್ನಿಸುವುದು ಅಸಾಧ್ಯವಾಗಿದೆ. ವರ್ಗಾವಣೆ ಬಹು ಕಷ್ಟದ ಕೆಲಸವಾಗುವುದು.

(ಎಂಟನೇ ಪುಟ ನೋಡಿರಿ).



### ಕುಂದಾಪುರ ಮುನ್ಸಿಫ್ ಕೋರ್ಟಿನಲ್ಲಿ

O. S. 62/1967.

ವಾದಿ —ದೇವರಾಯ ಕಾಮತ್

ಪ್ರತಿವಾದಿರು—1. ರೋಲ್ಡವರ್ ಪಿಂಟೊ, 2. ಲೋರೆನ್ಸ್ ಪಿಂಟೊ, 3. ಲೂಸಿ ಪಿಂಟೊ, 4. ರೋಸಿ ಪಿಂಟೊ, 5. ಲೂಸಿ ಪಿಂಟೊ, 6. ವಿಕ್ಟೋರಿಯಾ ಪಿಂಟೊ, 7. ಬೆತ್ತಯೂನೆ ಅಡ್ವಿನ್ ಪಿಂಟೊ, 8. ವಾಲ್ಟರ್ ಪಿಂಟೊ, 9. ಮೈನರ ಪುಶೋಸಿ, 10. ಮೈನರ ವಿಡೊ, 11. ಮೈನರ ಟೇರಿ,

ಕುಂದಾಪುರ ತಾಲೂಕು ಗಂಗೊಳ್ಳಿಗ್ರಾಮದಲ್ಲಿರುವವರು– ಪಾವುಲು ಪಿಂಟೋರವ ಮಗ ಲೋರೆನ್ಸ್ ಪಿಂಟೊ| ರುಜಾರಿ ಪಿಂಟೋರ ವಿಧವೆ ಲೂಸಿ ಪಿಂಟೊ| ರುಜಾರಿ ಪಿಂಟೋರರ ಮಗಳು ರೋಸಿ ಪಿಂಟೊ। ನಿಕೋಲಸ್ ಪಿಂಟೋರರ ವಿಧವೆ ಲೂಸಿ ಪಿಂಟೊ। ನಿಕೋಲಸ್ ಪಿಂಟೋರರ ಮಗ ಬೆತ್ತಯೂನೆ ಅಡ್ವಿನ್ ಪಿಂಟೊ। ಕೂಡಾ ಜನರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ—

ಸದ್ರಿ ವ್ಯವಹಾರಣೆಯಲ್ಲಿ ವಾದಿಗೆ ಪ್ರತಿವಾರಿಂದ ಬಂತಕ್ಕ ಕಳೆದ ಪ್ಲವ ಸಂವತ್ಸರದ ಆದಿಲಾಗ್ಯಾತಿನ ಮೂಲ ಗೇಣಿ ಗೇಣಿ ಬರಮಾಡಿಕೊಳ್ಳುವರೆ ವಾದಿಯು ಪ್ರತಿವಾದಿರ ಮೇಲೆ ದಾಖಲ್ಲು ಮಾಡಿದ ಮೇಲಿನ ದಾವೆಯು ತಾ. 30—9—1967ಕ್ಕೆ ಮೇಲಿನ ಕೋರ್ಟಿನಲ್ಲಿ ತನ್ಕಿಗೆ ಇರುತ್ತದ. ಆ ಕುರಿತು ಏನಾದರೂ ಆಕ್ಷೇಪಣೆಗಳಿದ್ದರೆ ಸದ್ರಿ ದಿವಸ ಮೇಲಿನ ಕೋರ್ಟಿನ ಮುಂದೆ ಹಗಲು 11ಗಂಟೆಗೆ ಹಾಜರಾಗಿ ಜಾಹೀರು ಮಾಡಿಕೊಳ್ಳತಕ್ಕದ್ದು, ಎಂಬ ಸಂಗ್ತಿ ಈ ಮೂಲಕ ತಿಳಿಯಪಡಿಸಿಯದ.

G. V. Aithal
Advocate for Plff.

Date 15—9—67, Coondapoor

## ವಿಚಾರ ವೀಚಿ

# ಧ್ಯೇಯ ಸಾಧನೆಯಲ್ಲ-ಸ್ವಾರ್ಥ ಸಾಧನೆ

ಲೇಖಕರು: ಶ್ರೀ "ಶಿವಶಂಕರ"

ಇಂದಿನ ದುರ್ಬಲ ಸರಕಾರದ ಸ್ಥಿತಿಗೆ ಪಕ್ಷಾಂತರದ ಪಿಡುಗೇ ಪ್ರಮುಖ ಕಾರಣವೆನ್ನಲಾಗುತ್ತಿದೆ. ಕೆಲವು ಸಲ ಧ್ಯೇಯ ಸಾಧನೆಗಾಗಿಯೂ ಪಕ್ಷೋಲ್ಲಂಘನೆ ನಡೆಸಬೇಕಾಗುತ್ತದೆ. ಆದರೆ ಇಂದು ನಡೆಯುತ್ತಿರುವ ಪಿಡುಗಿಗೆ ಧ್ಯೇಯ ಸಾಧನೆ ಕಾರಣ ಇರುವದಿಲ್ಲ; ಸ್ವಾರ್ಥ ಸಾಧನೆಯೇ ಕಾರಣವಿದೆ. ಇಂತಹವರು ಪಕ್ಷ ಪರಿದಾಟಕ್ಕೆ ಪ್ರಾರಂಭಿಸುವದು ತಮ್ಮ ಎಲ್ಲಾ ಅಸ್ತ್ರಗಳು ಮುಗಿದ ಮೇಲೆಯೇ ಅಲ್ಲಿಯವರೆಗೆ ಅವರು ಒಳಗಿದ್ದೇ ತಮ್ಮ ದಾಳವ ಉರುಳಿಸುತ್ತ ಇರುತ್ತಾರೆ. ಇದೇ ರೀತಿಯ ಉಪಾಯವೆನ್ನುತ್ತಾರೆ ದ್ರಾವಿಡ ಕಳ್ಗಮಿನ ತಂದೆ ತಿರು ರಾಮಸ್ವಾಮಿ ನಾಯ್ಕರ್‌ರವರು. ಶ್ರೀ ಅಂಬೇಡ್ಕರ್‌ರವರು ತಾವು ಹಿಂದೂ ಮತವನ್ನು (?) ತ್ಯಜಿಸಿ ಬೌದ್ಧ ಮತಕ್ಕೆ ಸೇರಿರುವದಾಗಿ ತಿಳಿಸಿದೊಡನೆ ತಿರು ರಾಮಸ್ವಾಮಿ ನಾಯ್ಕರ್‌ರವರು ಅದು ತಪ್ಪೆಂದು ಹೇಳಿ, ಹಿಂದೂ ಮತ (!)ದಲ್ಲಿದ್ದೇ ಅದನ್ನು ಹಾಳುಗೆಡವಿ "ಬ್ರಾಹ್ಮಣೇತರರ ಬಂಧನ"ವನ್ನು ಕಡಿದೊಗೆಯಬೇಕೆಂದು ತಿಳಿಸಿದ್ದರು. ಅದೇ ರೀತಿ ಕೆಲವರು ಕಾಂಗ್ರೆಸ್ಸಿನೊಳಗಿದ್ದೇ ಅದನ್ನು ಕೆಡವಲು ಪ್ರಯತ್ನಿಸುತ್ತಿದ್ದಾರೆ. ಅದರಲ್ಲಿ ಇನ್ನು ಕೆಲವರಿಗೆ ಕಾಂಗ್ರೆಸ್ಸನ್ನು ಬೀಳಿಸುವದು ಮುಖ್ಯವಲ್ಲ, ತಮ್ಮ ಬೇಳೆ ಬೇಯಿಸಿಕೊಳ್ಳುವದೇ ಮುಖ್ಯವಿದೆ. ಅಂತೂ ಇಂದು ಆಸನಕ್ಕಾಗಿ ತೀವ್ರಗತಿಯಲ್ಲಿ ಸ್ಪರ್ಧೆ ನಡೆಯುತ್ತಿದೆ. ತಾನು ಮಂತ್ರಿಯಾಗಿಯೇ ಸಾಯಬೇಕೆಂಬ ಸಂಕಲ್ಪವನ್ನು ಮಾಡಿಕೊಂಡವರೂ ಇರಬಹುದು! ಆದರಿಂದಾಗಿ ಬೃಹತ್ ಮಂತ್ರಿ ಮಂಡಲಗಳ ರಚನೆಯಾಗುತ್ತಿದೆ. ತಾತ್ಕಾಲಿಕ (ಆರು ತಿಂಗಳ) ಮಂತ್ರಿಗಳ ನೇಮಕವಾಗುತ್ತಿದೆ! ತಮ್ಮ ದಳಕ್ಕೋ, ಕಳ್ಗಮಿಗೋ, ಪಕ್ಷಕ್ಕೋ ಸೇರಿದರೆ ಸಾಕು, ಅವನು ಮಂತ್ರಿಯೇ ಆಗಿ ಬಿಡುತ್ತಾನೆ!

ಈ ಮಂತ್ರಿಮಂಡಲದ ಆಸನಕ್ಕಾಗಿ ನಡೆಯುತ್ತಿರುವ ಸ್ಪರ್ಧೆಯೂ ತಮಾಷೆಯದ್ದೇ ಇದೆ. ತಮಿಳುನಾಡಿನ ಜನತೆಗೆ ತಿರು ಮಾ. ಪೋ. ಶಿ. ಯವರ ಹೆಸರು ಗೊತ್ತು. ತಮಿಳಿಗಾಗಿಯೇ ಜೀವನ ಮುಡಿಪಾಗಿಟ್ಟವರೆನ್ನಲಾಗುತ್ತಿದೆ. ತಮಿಳುನಾಡಿನ ಕೆಲವು ಭಾಗ ಆಂಧ್ರ ಹಾಗೂ ಕೇರಳಕ್ಕೆ ಹೋಗಿದ್ದಾಗ ಇವರ ನೇತೃತ್ವದಲ್ಲಿ ಭಾರೀ ಚಳುವಳಿಗಳು ನಡೆದಿದ್ದವು. ಸ್ವಾತಂತ್ರ್ಯ ಹೋರಾಟದಲ್ಲೂ ಭಾಗವಹಿಸಿದವರಿದ್ದಾರೆ. ಇವರು ತಮಿಳು ಅರಸು ಕಳ್ಗಮಿನ ಸ್ಥಾಪಕ ಮುಂದಾಳು. ಇದು ಹಿಂದೆ ರಾಜಕೀಯ ಪಕ್ಷವಾಗಿರಲಿಲ್ಲ. ಕಳೆದ ಚುನಾವಣೆಯ ಸಮಯ ಶ್ರೀ ಮಾ. ಪೋ. ಶಿ. ಯವರಿಗೆ ಅದೇನು ಹೊಳೆಯಿತೋ! ತಮಿಳು ಅರಸು ಕಳ್ಗಂ ರಾಜಕೀಯ ಪಕ್ಷವೆಂದು ಪ್ರಕಟಿಸಿ ದ್ರಾ. ...ದೊಂದಿಗೆ ಚುನಾವಣಾ ಹೊಂ... ...ರಲ್ಲದೆ, ಸ್ವತಃ, ಅವರೇ ದ್ರಾ. ಮು. ಕ. ದ ಚುನಾವಣಾ ಚಿಹ್ನೆಯನ್ನು ಉಪಯೋಗಿಸಿಕೊಂಡರು; ಗೆದ್ದರು ವಿಧಾನ ಸಭೆ ಆರಂಭವಾಗುವಾಗ ಅಧ್ಯಕ್ಷರ ಸ್ಥಾನಕ್ಕೆ ಅವರ ಹೆಸರು ಸೂಚಿಸಲ್ಪಟ್ಟಿತು. ಶ್ರೀಯುತರು ದ್ರಾ. ಮು. ಕ. ದ ಚುನಾವಣಾ ಚಿಹ್ನೆಯನ್ನು ಉಪಯೋಗಿಸಿಕೊಂಡಿರುವರೇ ವಿನಃ ಪಕ್ಷದ ಸದಸ್ಯರಲ್ಲವಾದ ಕಾರಣ ಅವರ ಹೆಸರು ತಿರಸ್ಕರಿಸಲ್ಪಟ್ಟಿತು. ಇದೀಗ ಮಂತ್ರಿ ಪದವಿಗೆ ಅವರ ಹೆಸರನ್ನು ಸೂಚಿಸಲಾಗುತ್ತಿದೆ. ದ್ರಾ. ಮು. ಕ. ಕ್ಕೂ ದೇವಸ್ಥಾನ ಸಂಬಂಧಕ್ಕೂ ಎಣ್ಣೆ ಶೀಗೆ ಕ್ಕಾಯಿರುವದರಿಂದ ಹಿಂದೂ ಮತೀಯ ಉಂಬಳಿ ಖಾತೆಗೆ ಅವರನ್ನು ಮಂತ್ರಿಯನ್ನಾಗಿ ಮಾಡುವ ಯೋಚನೆ ಇದೆ. ಆದರೆ ಅದೇ ಪಕ್ಷದ ಹೆಸರು ಅಡ್ಡಿ ಬರುತ್ತಾ ಇದೆ. ಇದೀಗ ಅವರು ತಮ್ಮ ಕಳ್ಗಂ ರಾಜಕೀಯ ಪಕ್ಷ ಅಲ್ಲವೆಂದು ಪ್ರಕಟಿಸಿದ್ದಾರೆ. ಆ ಕಳ್ಗಮಿನಲ್ಲಿರುವವರು ಅದ್ಯಾವ ರಾಜಕೀಯ ಪಕ್ಷಕ್ಕೂ ಸೇರಬಹುದು. ಅಧಿಕಾರ ದಾಹ ಪಕ್ಷಾಂತರಕ್ಕೆ ಮಾತ್ರ ಪ್ರೇರೇಪಿಸುವದಲ್ಲ, ಪಕ್ಷದ ವಿನಾಶಕ್ಕೂ ಪ್ರೇರೇಪಿಸುತ್ತಿದೆ. ಇವರಿಗೆ ರಾಜಕೀಯ ಪಕ್ಷವೆಂದರೆ ಉಡುಪುಗಳೇ ಇವೆ—ಬೇಕಾದಾಗ ಬೇಕಾದ ಬಟ್ಟೆಗಳನ್ನುಟ್ಟುಕೊಳ್ಳುವದು, ಅಷ್ಟೇ.

ಕೆಲವರು ಪಕ್ಷಾಂತರ ನಡೆಸುವ ಪ್ರದರ್ಶನ ನಡೆಸುವವರೂ ಇದ್ದಾರೆ. ಭಾರತದ ಗೃಹಮಂತ್ರಿ ಶ್ರೀ ಯಶವಂತ ಚವ್ಹಾಣರು ಕಾಂಗ್ರೆಸ್ಸಿನಿಂದ ಕಾಲ್ತೆಗೆದು, ಎದುರು ಪಕ್ಷಗಳೊಂದಿಗೆ ಕೈ ಮಿಲಾಯಿಸಿಕೊಂಡು ಪ್ರಧಾನಿ ಪಟ್ಟವನ್ನೇರುವರೆಂದು ಮಹಾರಾಷ್ಟ್ರದ ಪತ್ರಿಕೆಗಳು ಪ್ರಕಟಿಸಿದವು. ಶ್ರೀ ಚವ್ಹಾಣರಾದರೋ "ಇಲ್ಲ" ವೆಂದರು ಅಷ್ಟೇ. ಅವರ ಹಿಂದ ಗಡೆ ಪನ್ನಲ್ ಬಾಗಿ 'ಶಿವಸೇನೆ' (ಶವಸೇನೆ!) ಇದೆಯೆಂದು ಹೇಳಲಾಗುತ್ತಿದೆ. ಇವರು "ಇಲ್ಲ" ನ್ನುತ್ತಾರೆ ಅಷ್ಟೇ. ಅದಕ್ಕಿಂತ ಹೆಚ್ಚಿನ ಕ್ರಮ ಏನನ್ನೂ ತೆಗೆದುಕೊಳ್ಳುವದಿಲ್ಲ. ಆದರ ಬದಲು ಅಂತಹ ಸಮಾಚಾರಗಳಿಗೆ ಅವಕಾಶವನ್ನೊದಗಿಸುತ್ತಿರುತ್ತಾರೆ. ಇತ್ತೀಚಿಗೆ ಅವರು 'ಮರಾಯಿ ಮಂಡಿ' ಪತ್ರಿಕೆಯ ಉದ್ಘಾಟನೆ ಮಾಡಿದರು. ಶ್ರೀಯುತರು ಕೇವಲ ಮಹಾರಾಷ್ಟ್ರದ ಗೃಹಮಂತ್ರಿಯಾಗಿರುವದಿಲ್ಲ. ಭಾರತದ ಗೃಹ ಸಚಿವರಿದ್ದಾರೆ. ಮಹಾರಾಷ್ಟ್ರವು ಭಾರತದ ಒಂದು ಅಂಗವಿದೆ. ಮರಾಠಿಯು ಭಾರತೀಯ ಭಾಷೆಗಳಲ್ಲಿ ಒಂದು. ಅಂದರೆ ಭಾರತ ಮಾತೆಯ ಕೈ ಅಥವಾ ಕಾಲು.... ಒಂದು ಅಂಗ ಅಷ್ಟೇ. ಕುರುಡರು ಆನೆಯ ಅಂಗವನ್ನೇ ಆನೆಯೆಂದಂತೆ ಮರಾಠಿಯನ್ನೇ ಮಾಯಿ (ತಾಯಿ), ಮಹಾರಾಷ್ಟ್ರವನ್ನೇ ತಾಯ್ನಾಡು ಅನ್ನುವಂತಹ ರಾಜಕೀಯ ಅಂಧರು ಅದೆಂತು ಭಾರತದ ಸಚಿವರಾಗಿ ಇರಲು ಸಾಧ್ಯ? ಅದರಲ್ಲೂ ಗೃಹ ಶಾಖೆ ಅವರ ಕೈಯಲ್ಲಿ ಇದೆ! ಮರಾಠಿಯೇ ಇವರ ಮಾಯಿ ಇರುವದರಿಂದ ಮಹಾರಾಷ್ಟ್ರಕ್ಕಾಗಿಯೇ ಏನೇನೋ ಮಾಡುತ್ತಿರುವ ಶಿವಸೇನೆಯತ್ತ ಇಂತಹವರು ಮೆದುವಾಗಿ ವರ್ತಿಸಲೇ ಬೇಕಾಗುತ್ತದೆ. ಆಗ-ಬಸವ ಸೇನೆಯನ್ನೋ, ದ್ರಾವಿಡ ಕಳ್ಗಮನ್ನೋ, ದ್ರಾವಿಡ ಮುನ್ನೇಟ್ರ ಕಳ್ಗಮನ್ನೋ, ಅಖಾಲಿ ದಳವನ್ನೋ, ನಾಗಾ ವಿದ್ರೋಹಿಗಳನ್ನೋ ನ್ಯಾಯಪೂರ್ಣ ರೀತಿಯಲ್ಲಿ ದಂಡಿಸಿ ಭಾರತದ ಭದ್ರತೆಯನ್ನು ಕಾಪಾಡಲು ಇವರಿಂದ ಸಾಧ್ಯವಾಗುವದಿಲ್ಲ. ಕೇವಲ ಮರಾಠಿಯೇ ಸರ್ವಸ್ವವೆನ್ನುವವರು ಮಹಾ ಆಸನದಿಂದ ಮೆತ್ತಗೆ ಕೆಳಗಿಳಿದುಕೊಂಡು ಬಂದು ಮಹಾರಾಷ್ಟ್ರದಲ್ಲೇ ಮನೆ ಮಾಡಿಕೊಂಡಲ್ಲಿ ಭಾರತಕ್ಕೆ ಬಹಳ ಒಳ್ಳೆಯದು. ಇಲ್ಲದಿದ್ದಲ್ಲಿ ವಿಭಜನಾ ವಿದ್ರೋಹಿಗಳ ಆಟ ಅಧಿಕವಾದೀತು. ರಾಷ್ಟ್ರೀಯತೆಯ, ಐಕ್ಯತೆಯ ವಟ ವೃಕ್ಷವನ್ನು ಕಡಿಯುವವರಿಗೆ ಪ್ರೋತ್ಸಾಹ ಕೊಟ್ಟಂತಾಗುತ್ತದೆ. ಇದು ಭಾಷಾ ವ್ಯಾಮೋಹ ಹಾಗೂ ಪ್ರಾಂತೀಯ ಮನೋಭಾವನೆಯ ಒಂದು ಉದಾಹರಣೆ. ಇವರಿಗೆ ಮೀಸೆಯ ಮೇಲೂ ಆಶೆ, ಗಂಜಿಯ ಮೇಲೂ ಆಶೆ, ಆ ರೀತಿ— ಮಹಾರಾಷ್ಟ್ರದಲ್ಲಿ ಕಾಲೂರಲು ಸ್ಥಳಬೇಕು, ದಿಲ್ಲಿಯಲ್ಲಿ ಕುಳಿತುಕೊಳ್ಳಲು ಆಸನಬೇಕು! ಅದೆಷ್ಟು ದಿನ ಬಂಡಿಯಿಲ್ಲದ ಆ ಜೋಡೆತ್ತುಗಳ ಮೇಲೆ ಒಬ್ಬ ಸವಾರಿ ಮಾಡಲು ಸಾಧ್ಯ!

"ನವಯುಗ"ದ ಸ್ವಾತಂತ್ರ್ಯದಿನದ ವಿಶೇಷಾಂಕದಲ್ಲಿ ಶ್ರೀ ಮುಹಮ್ಮದ್ ಕರೀಂ ಭಾಗ್ಲರವರ ವಿಷಯ ಒಂದು ಲೇಖನದಲ್ಲಿ ಪ್ರಕಟವಾಗಿತ್ತು. ಅದರ ಸತ್ಯಾ ಸತ್ಯತೆಯು ಬೆಳಕಿಗೆ ಬರುತ್ತಾ ಇದೆ. ಶ್ರೀಯುತರು ಭಾರತದ ಭೂಭಾಗ "ಸೇಕ್ರೆಡ್" ಇರುವ ಕಾರಣ ಒಂದಂಗುಲ ಭೂಮಿಯನ್ನೂ ಆಕ್ರಮಣಗಾರರಿಗೆ (ಪಾಕಿಸ್ಥಾನಿಗಳಿಗೆ) ಬಿಟ್ಟು ಕೊಡುವದಿಲ್ಲವೆಂದು ಸಾರಿದ್ದರು. ಸೇಕ್ರೆಡ್ ಅಂದರೆ ಸಾಮಾನ್ಯ ಅರ್ಥ ಪವಿತ್ರ ಇದೆ. ಇದಾಗಲೇ ಬಹಳಷ್ಟು ಭೂ ಪ್ರದೇಶವನ್ನು ಪಾಕಿಸ್ಥಾನಿಗಳಿಗೂ, ಚೈನೀಯರಿಗೂ ಬಿಟ್ಟು ಕೊಟ್ಟ ಮೇಲೂ, ಹಿಂದಿನ ಪ್ರಧಾನಿಯವರೊಬ್ಬರು ಭಾರತದ ಅಂಗವೆಂದರೇನು—ಕಲ್ಲು, ಮುಳ್ಳು ಮಣ್ಣು, ಹುಲ್ಲು ತಾನೇ ಎಂದು ಸ್ಪಷ್ಟ ಪಡಿಸಿರುವದರಿಂದ, ಆ ಕಳೆದು ಕೊಳ್ಳಲಾದ ಭೂ ಪ್ರದೇಶವನ್ನು ಪಡೆದುಕೊಳ್ಳಲು ಮಿತ್ರ ವ್ಯವಹಾರ ಹಾಗೂ ಸಂಧಾನ—ಮಾತುಕತೆಯಲ್ಲದೆ ಪೌರುಷದ ಕಾರ್ಯಕ್ಕೆ ಕೈ ಹಾಕುವದಿಲ್ಲವಾಗಿ ಕೇಂದ್ರದ ಎಲ್ಲಾ ಮಂತ್ರಿಗಳು ಹಾಗೂ ಕಾಂಗ್ರೆಸ್ಸ ಪಕ್ಷವೂ, ಘೋಷಿಸಿರುವಾಗ ಭಾರತದ ಭೂಭಾಗ ಪವಿತ್ರವೆನ್ನುವದರಲ್ಲಿ ಅರ್ಥವಿರುವದಿಲ್ಲ. ಆದರ ಬದಲು 'ಸೇಕ್ರೆಡ್' ಅಂದರೆ ಸಮರ್ಪಿತ, ಮೀಸಲಾದ (ಆಕ್ರಮಣಗಾರರಿಗೆ ಸಮರ್ಪಿತ) ಭೂ ಪ್ರದೇಶವೆನ್ನುವದೇ ಸರಿಯಾದೀತೆಂದು ವಿಶೇಷಾಂಕದ ಲೇಖನದಲ್ಲಿ ಸ್ಪಷ್ಟವಾಗಿ ಸೂಚಿಸಲಾಗಿದೆ.

ಅದೇ ಜನಾಬ್ ಮುಹಮ್ಮದ್ ಕರೀಂ ಭಾಗ್ಲಾರವರು ಇನ್ನೊಂದು ಸಲ ಏನೂ ಹೇಳದೆ ಸುಮ್ಮನಿದ್ದ ಪ್ರಸಂಗ ಒಂದು ಲೋಕ ಸಭೆಯಲ್ಲಿ ನಡೆಯಿತು. ತ್ರಿಪುರ ಪೂರ್ವ ಬಂಗಾಲದ ಗಡಿಯಲ್ಲಿ ಪಾಕಿಸ್ಥಾನವು ಐದು ಚದರ ಮೈಲು ಭೂ ಪ್ರದೇಶವನ್ನು ಆಕ್ರಮಿಸಿಕೊಂಡಿರುತ್ತದೆ. ಅದರ ಬಿಡುಗಡೆಗಾಗಿ ಸೇನೆಯನ್ನೇತಕ್ಕೆ ಕಳುಹಿಸಿಲ್ಲವೆಂದು ಪ್ರ. ಸೋ. ಪಾರ್ಟಿಯ ಹೇಮ ಬರುವಾ ಲೋಕ ಸಭೆಯಲ್ಲಿ ಕೇಳಿದಾಗ ಶ್ರೀ ಭಾಗ್ಲಾ ಕಾರಣ ಹೇಳಲಾರಂಭಿಸಿದರು — ಆ ಭೂ ಪ್ರದೇಶವನ್ನು ಪಾಕಿಸ್ಥಾನಿಗಳು ಬಿಟ್ಟುಹೋಗಬೇಕೆಂದೂ, ಅದು ಭಾರತಕ್ಕೆ ಸೇರಿದ ಭೂಭಾಗವೆಂದು ನಾವು ಅವರಿಗೆ ತಿಳಿಸಿರುವೆವು. ಭೂ ಪ್ರದೇಶವನ್ನು ಪಡೆಯುವದಕ್ಕಾಗಿ ಅಂದರೆ ಪಾಕಿಸ್ಥಾನಿಗಳು ಆ ಭೂ ಪ್ರದೇಶವನ್ನು ನಮಗೆ ಬಿಟ್ಟು ಹೋಗುವಂತೆ ಅವರ ಮನ ಒಲಿಸಲು ರಾಜತಾಂತ್ರಿಕ ರಂಗದಲ್ಲಿ ಮಾತುಕತೆ ನಡೆದಿರುತ್ತದೆ ಮತ್ತು ಅವರ ಮನ ಒಲಿಸಲು ಭಾರತ ಸರಕಾರ ಪ್ರಯತ್ನಿಸುತ್ತಿದೆ. ಈ ಮಾತುಗಳಿಂದ ಶ್ರೀ ಹೇಮ ಬರುವಾರವರ ಮನ ಒಲಿಸಲು ಸಾಧ್ಯವಾಗಲಿಲ್ಲ. ಅವರು ಸೇನೆಯನ್ನೇತಕ್ಕೆ ಕಳುಹಿಸಿಲ್ಲವೆಂದು 'ಶಾಂತಿ ಪ್ರಿಯ' ಪರದೇಶಿ ಮಂತ್ರಿ ಶ್ರೀ ಭಾಗ್ಲಾರನ್ನು ಪ್ರಶ್ನಿಸಿದರು. ಅದಕ್ಕೆ ಶ್ರೀ ಭಾಗ್ಲರವರು ಆಕ್ರಮಣ ನಡೆಸಿರುವ ವಿಷಯ ಪಾಕಿಸ್ಥಾನಕ್ಕೆ ಸ್ಪಷ್ಟವಾಗಿ ಸೂಚಿಸಲಾಗಿದೆ. ಅವರಾದರೋ ದುರಾದೃಷ್ಟವಶಾತ್ ಬಲಾತ್ಕಾರದಿಂದ ಬಂದಿದ್ದಾರೆ. ಆದರೆ ನಾವು ಒಪ್ಪಂದಕ್ಕೆ ಒಳಗಾಗಿರುವದರಿಂದ, ತಟಸ್ಥಧೋರಣೆಯನ್ನು ಅನುಸರಿಸಬೇಕಾಗಿರುವದರಿಂದಾಗಿ ಅಲ್ಲಿಗೆ ಹೋಗುವಂತಿಲ್ಲವೆಂದು ಶ್ರೀಯುತರು ತಮ್ಮ ಅಸಹಾಯಕತೆಯನ್ನು ಪ್ರಕಟಿಸಿದರು.

ಪ್ರ. ಸೋ. ಪಾರ್ಟಿಯವರಿಗಿಂತಲೂ ಸ. ಸೋ. ಪಾರ್ಟಿಯವರು ಕಾರ ತಿನ್ನುವದು ಹೆಚ್ಚೆಂದು ಕಾಣುತ್ತದೆ. ಅಂತೆಯೇ ಸ. ಸೋ. ಪಾರ್ಟಿಯ ಶ್ರೀ ಮಧು ಲಿಮಾಯಿಯವರು ಶ್ರೀ ಭಾಗ್ಲಾರನ್ನು ತರಾಟೆಗೆ ತೆಗೆದುಕೊಂಡರು. ಇಂಡಿಯಾದ ಜನ ಸಂಖ್ಯೆಯು ಪಾಕಿಸ್ಥಾನದ ಜನಸಂಖ್ಯೆಗಿಂತ ಐದು ಪಾಲು ಜಾಸ್ತಿ ಇದೆ. ಹಾಗಿದ್ದರೂ, ಇಪ್ಪತ್ತು ವರ್ಷಗಳಲ್ಲಿ ಇಲ್ಲಿ-ಅಲ್ಲಿ, ಹೀಗೆ ಅನೇಕೆಡೆಗಳಲ್ಲಿ ಪಾಕಿಸ್ಥಾನ ಎಡೆಬಿಡದೆ ಭಾರತಕ್ಕೆ ಸೇರಿದ ಭೂಭಾಗವನ್ನು ಆಕ್ರಮ ರೀತಿಯಲ್ಲಿ ವಶಪಡಿಸಿಕೊಳ್ಳುತ್ತಿದೆ. ಸರಕಾರವು ಇಂತಹ ನಪುಂಸಕ ಧೋರಣೆಯನ್ನು ಬಿಟ್ಟು, ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳುವಂತೆ, ಪಾಕಿಸ್ಥಾನದ ಭೂ ಪ್ರದೇಶವನ್ನು ವಶಪಡಿಸಿಕೊಳ್ಳಬೇಕು. ಆಗ ಮಾತ್ರ ಪಾಕಿಸ್ಥಾನವು ಸಂಧಾನಕ್ಕೆ ಬಂದೀತೆಂಬ ಶ್ರೀ ಮಧು ಲಿಮಾಯಿ ತಿಳಿಸಿದರು. ಅದಕ್ಕೆ ಶ್ರೀ ಭಾಗ್ಲಾರವರು ಸರಕಾರಕ್ಕೆ ಇದೊಂದು ಸೂಚನೆಯೆಂದು ಹೇಳಿದರು.

ಭಾರತದ ಭವಿಷ್ಯದತ್ತವೇ ದೃಷ್ಟಿ ಇರುವ ಭಾರತೀಯ ಜನಸಂಘದ ಅಧ್ಯಕ್ಷ ಶ್ರೀ ಬಲರಾಜ ಮಧೋಕರವರು ಭವಿಷ್ಯದತ್ತ ಶ್ರೀ ಭಾಗ್ಲರ ಗಮನ ಸೆಳೆದರು.

ಇನ್ನು ಎರಡು ತಿಂಗಳಲ್ಲಿ ಪಾಕಿಸ್ಥಾನವು ಭಾರತದ ಮೇಲೆ ಪಡೆಯೆತ್ತಿಕೊಂಡು ಬರಬಹುದೆಂದು ವರದಿಯಾಗಿರುತ್ತದೆ. ಹಾಗೇನಾದರೂ ಆದಲ್ಲಿ ಭಾರತದ ಭೂಪ್ರದೇಶವನ್ನು ಈ ಸಲವಾದರೂ ಸರಕಾರ ಬಿಟ್ಟು ಕೊಡುವದಿಲ್ಲವೆಂಬುದಕ್ಕೆ ಪ್ರಧಾನಿಯವರು ಆಶ್ವಾಸನೆ ನೀಡಬಲ್ಲರೇ?— ನೇರ ಪ್ರಶ್ನೆ.

ಇದಕ್ಕೆ ಪ್ರಧಾನಿಯವರಾಗಲೀ, ಅಷ್ಟರ ವರೆಗೆ ಉತ್ತರ ಕೊಡುತ್ತ ಬಂದಿದ್ದ ಶ್ರೀ ಛಾಗ್ಲರವರಾಗಲೀ ತುಟಿ ಎರಡು ಮಾಡಲಿಲ್ಲ. ಹಾಗಾದರೆ ಅದರ ಅರ್ಥವೇನು? ಪಾಕಿಸ್ಥಾನ ಆಕ್ರಮಣ ನಡೆಸಿ ಭೂ ಪ್ರದೇಶವನ್ನು ವಶಪಡಿಸಿಕೊಂಡಲ್ಲಿ ಅದನ್ನು ತಡೆಯಲು ನಮ್ಮಿಂದ ಸಾಧ್ಯವಿಲ್ಲವೆಂದಾಯಿತು. ಇದಕ್ಕೆ ರಕ್ಷಣಾ ಮಂತ್ರಿ, ಪರದೇಶ ಸಂಪರ್ಕ ಸಚಿವ, ಪ್ರಧಾನಿ.... ಬೇಕೇನು? ಎಳ್ಳು ನೀರು ಬಿಡುವದರಲ್ಲಿ ಒಬ್ಬರನ್ನೊಬ್ಬರು ಇವರು ಮೀರಿಸುತ್ತಿದ್ದಾರೆ!

ತಾತ್ಕಾಲಿಕ ವಿಭಜನೆ ಎನ್ನಲಾಗಿದ್ದ ಪಾಕಿಸ್ಥಾನವನ್ನು ವಿಲೀನಗೊಳಿಸುವದು ಹಾಗಿರಲಿ, ಆ ಪಾಕಿಸ್ಥಾನ ಆಕ್ರಮಿಸಿಕೊಂಡಿರುವ ಭೂ ಪ್ರದೇಶವನ್ನು ಬಿಡಿಸಿಕೊಳ್ಳಲು ಇಪ್ಪತ್ತು ವರ್ಷಗಳಲ್ಲಿ ನಮಗಾಗಿಲ್ಲ. ಮಾತ್ರವಲ್ಲ, ಇನ್ನು ಮುಂದಿನ ಆಕ್ರಮಣವನ್ನು ನಮ್ಮಿಂದ ತಡೆಗಟ್ಟಲು ಸಾಧ್ಯವಿಲ್ಲವೆಂದಾದಲ್ಲಿ ನಾವು ಚೈನೀ ಆಕ್ರಮಣವನ್ನೆದುರಿಸುವದುಂಟೇ? ಇಂತಹ ದುಃಸ್ಥಿತಿಯುತ್ತ ನಮ್ಮನ್ನು ನಡೆಸಿದವರ್ಯಾರು? ಇದಕ್ಕಾಗಿ ಗೃಹ ಸಚಿವ, ರಕ್ಷಣಾ ಮಂತ್ರಿ, ಪರದೇಶ ಸಂಪರ್ಕ ಅಮಾತ್ಯ, ಪ್ರಧಾನಿ ಮುಂತಾದವರ ಆವಶ್ಯಕತೆ ಇದೆ ಏನು?

ಇದಕ್ಕೂ ಪಕ್ಷಾಂತರಕ್ಕೂ ಸಂಬಂಧ ಇದೆ. ಏನು? ಪಕ್ಷಾಂತರ ಒಳ್ಳೆಯದೇ? ಪಕ್ಷದಲ್ಲಿದ್ದುಕೊಂಡೇ ದೇಶವನ್ನು ದುಸ್ಥಿತಿಗೆ ತಳ್ಳಿ ಬಿಡುವದೊಳ್ಳೆಯದೇ? ಇಷ್ಟೆಲ್ಲಾ ನಡೆಯುತ್ತಿದೆಯಾದರೂ ಇಂದಿನ ದುಸ್ಥಿತಿಗೆ ಕಾಂಗ್ರೆಸ್ಸೇತರ ಸರಕಾರಗಳೇ ಕಾರಣವೆಂದು ಕಾಂಗ್ರೆಸ್ಸಿನ ಅಧ್ಯಕ್ಷ ತಿರು ಕಾಮರಾಜರು ಕಾಲಿಟ್ಟಲ್ಲೆಲ್ಲಾ ಹೇಳುತ್ತಾ ತಿರುಗಾಡುತ್ತಿದ್ದಾರೆ. ಕಾಂಗ್ರೆಸ್ ಹೋದಲ್ಲಿ ದೇಶವೇ ಹೋಗುತ್ತದೆಂದು ಭಯ ಹುಟ್ಟಿಸುತ್ತಿದ್ದಾರೆ. ಅದಕ್ಕಾಗಿ ಬಿಹಾರ್ ಮುಂತಾದೆಡೆಗಳಲ್ಲಿ ಕಾಂಗ್ರೆಸ್ಸೇತರ ಮಂತ್ರಿಮಂಡಲವನ್ನುರುಳಿಸಲು ಪ್ರಯತ್ನಿಸಲಾಗುತ್ತಿದೆ. ಆಶೆ ಆಮಿಷಗಳಿಗೊಳಗಾಗಿ ಕಾಂಗ್ರೆಸ್ಸಿಗೆ ಬರುವಂತೆಯೇ ಆಶೆ— ಆಮಿಷಗಳಿಗೊಳಗಾದವರು ಕಾಂಗ್ರೆಸ್ಸಿನಿಂದ ಹೊರ ಹೋಗುವದು ಸ್ವಾಭಾವಿಕವೇ ಇದೆ. ಕೆಲವರು ತಮ್ಮ ಸ್ಥಾನ ಭದ್ರವಾಗಿರುವ ವರೆಗೆ ಮಂತ್ರಿಮಂಡಲದ ಇರುತ್ತಾರೆ. ಅನಂತರ ಬಾಲ ಕಳೆದು ಕೊಂಡ ನರಿಗಳಂತೆ ಹೊರಬಂದೊಡನೆ ಸಿಕ್ಕಾಬಟ್ಟೆ ಅಪಪ್ರಚಾರಕ್ಕೆ ಆರಂಭಿಸುತ್ತಾರೆ. ಈ ರೀತಿ ಆಸನಕ್ಕಾಗಿ ಹೋರಾಟ ನಡೆಸುತ್ತಿರುವವರು ಧ್ಯೇಯಸಾಧನೆಗಾಗಿ ಹಾಗೆ ಮಾಡುತ್ತಿರುವದಿಲ್ಲ. ಕೇವಲ ಸ್ವಾರ್ಥ ಸಾಧನೆಗಾಗಿ ಹಾಗೆ ಮಾಡುತ್ತಿದ್ದಾರೆ. ಅಂತಹವರು ರಾಜಕೀಯ ರಂಗದಿಂದ ದೂರ ಹೋದಷ್ಟೂ ಜನತೆಗೆ ಹಿತ. ಆದರೆ ಸುಲಭದಲ್ಲಿ ಅವರು ಆಸನದಿಂದ ಕೆಳಗಿಳಿಯುವದೆಂದಿಲ್ಲ.

---

### ಚಿಂತನ—ಮಥನ

# ಗಾಂಧಿ ಜಯಂತಿಯ ಸಂದೇಶ

ಲೇ— ಶ್ರೀ ಅ. ವಾ. ಹೊದಿಕೆ

ಗಾಂಧಿಯವರು ಕ್ರಾಂತಿ ಪುರುಷರಾಗಿದ್ದರು. ಅವರದು ಸಮಗ್ರ ದೃಷ್ಟಿಯಾಗಿತ್ತು. ಅವರ ಕಣ್ಮುಂದೆ ನವ ಸಮಾಜದ ಸುಸ್ಪಷ್ಟ ಚಿತ್ರವಿತ್ತು. ಸುಸ್ಪಷ್ಟ ಗುರಿ ಇತ್ತು. ಅವರ ಪ್ರತಿಯೊಂದು ಹೆಜ್ಜೆಯು ಆ ಗುರಿಯ ದಿಶೆಯಲ್ಲೇ ಇರುತ್ತಿತ್ತು.

ಸತ್ಯ ಶೋಧನವನ್ನೇ ಅವರು ಜೀವನದ ಉದ್ದೇಶವಾಗಿರಿಸಿದ್ದರು. ಅವರ ಶೋಧಕ ದೃಷ್ಟಿಯು ಎಂದೂ ಮಸುಕಾಗಿರಲಿಲ್ಲ. ಹೀಗೆಂದೇ ಅವರು ನಿತ್ಯ ನೂತನ ಪ್ರಯೋಗ ನಡಿಸುತ್ತಿದ್ದರು. ಮತ್ತು ನಿತ್ಯ ನೂತನ ಸ್ಫೂರ್ತಿ ಪಡೆಯುತ್ತಿದ್ದರು.

ಅವರದು ಜೀವನ ಶಿಕ್ಷಣ ದೃಷ್ಟಿಯಾಗಿತ್ತು. ಅವರು ಜೀವನದೊಳಗಿಂದಲೇ ಎಲ್ಲವನ್ನೂ ಕಂಡುಕೊಳ್ಳುತ್ತಿದ್ದರು. ಮತ್ತು ಪ್ರತಿಯೊಂದು ವಿಚಾರವನ್ನು ಜೀವನದಲ್ಲಿ ಇಳಿಸುತ್ತಿದ್ದರು. ತಮ್ಮ ಜೀವನದಿಂದ, ತಮ್ಮ ದಿನನಿತ್ಯದ ನಡೆನುಡಿಗಳಿಂದಲೇ ಜನರಿಗೆ ಶಿಕ್ಷಣ ಕೊಡುತ್ತಿದ್ದರು.

ಅವರು ವಿಶಾಲ ದೃಷ್ಟಿಯವರಾಗಿದ್ದರು. ಜತೆಯಲ್ಲೇ ಸೂಕ್ಷ್ಮ ದೃಷ್ಟಿಯವರೂ ಆಗಿದ್ದರು. ಅವರಲ್ಲಿ ಸಮಗ್ರತೆಯೂ ಇತ್ತು. ಏಕಾಗ್ರತೆಯೂ ಇತ್ತು ವೇದಾಂತದಿಂದ ವಿಜ್ಞಾನದವರೆಗೆ, ರಾಜಕಾರಣದಿಂದ ಸಮಾಜ ಕಾರಣದವರೆಗೆ, ಲಕ್ಷಾಧೀಶರಿಂದ ಹಿಡಿದು ಭಿಕ್ಷಾಧೀಶರ ವರೆಗೆ ಯಾವ ಕ್ಷೇತ್ರವೂ ಅವರ ಕಾರ್ಯಕ್ಷೇತ್ರದಿಂದ ಹೊರಗುಳಿಯುತ್ತಿರಲಿಲ್ಲ.

ಅವರ ಕಾರ್ಯಕ್ರಮಗಳೆಲ್ಲ ಅವರ ಜೀವನ ಕ್ರಮಗಳಾಗಿದ್ದವು. ಅವರ ಚಿಂತನ—ಮಥನ, ಶೋಧನ— ಸಾಧನ, ಲೇಖನ—ಭಾಷಣ, ಜೀವನ ಮತ್ತು ಮರಣ ಬಹುಜನ ಸಮಾಜವನ್ನು ಅನುಲಕ್ಷಿಸಿಯೇ ಇತ್ತು.

ಅತ್ಯಂತ ಉಪೇಕ್ಷಿತ ಭಂಗೀ, ಹರಿಜನ, ರೈತ, ಕೂಲಿಕಾರ, ಸ್ತ್ರೀ ಸಮಾಜ, ಹಳ್ಳಿಯ ಸಮಾಜ, ಕುಷ್ಠಾದಿ ರೋಗಪೀಡಿತ ಜನ, ಅರ್ಥಾತ್ ದರಿದ್ರನಾರಾಯಣ, ಶೋಷಿತ ವರ್ಗ ಹಾಗೂ ಗೋಮಾತೆ ಇವೇ ಅವರ ಉಪಾಸ್ಯ ದೇವತೆಯಾಗಿದ್ದರು.

ಒಟ್ಟಿಗೆ ಅವರೊಬ್ಬ ಪುರುಷಾರ್ಥೀ, ಅಸಮ ಸಾಹಸಿ, ಅಖಂಡ ಪ್ರಯತ್ನ ಶೀಲ ಹಾಗೂ ಅಪ್ರತಿಮ ಪರಾಕ್ರಮಿಗಳಾದ ಪೂರ್ಣ ಪುರುಷರಾಗಿದ್ದರು. ವಿಶ್ವಮಾನವರಾಗಿದ್ದರು. ವಿಶ್ವವಂದ್ಯರಾಗಿದ್ದರು.

ನೂರು ವರ್ಷಕಾಲ ಬದುಕಿ ಉಳಿದು, ಜಗತ್ತಿಗೊಂದು ಆದರ್ಶವಾದ ನವಸಮಾಜವನ್ನು ನಿರ್ಮಿಸಬೇಕೆಂಬುದು ಅವರ ಜೀವನದ ಹೆಬ್ಬಯಕೆಯಾಗಿತ್ತು.

ಕಾಂಗ್ರೆಸ್ಸು ರಾಜಕೀಯ ಉದ್ದೇಶ ಸಾಧನೆಗಾಗಿ ಕಟ್ಟಿದ, ಪರಿಮಿತ ಉದ್ದೇಶದ ಸಂಸ್ಥೆಯಾಗಿತ್ತು. ಆದರೂ ಗಾಂಧಿಯವರಿಗೆ ಅದರ ಆಶ್ರಯ ಅನಿವಾರ್ಯವಾಗಿತ್ತು. ಮತ್ತು ಕಾಂಗ್ರೆಸ್ಸಿಗೂ ಗಾಂಧಿಯವರ ಆಧಾರ ಅಪರಿಹಾರ್ಯವಾಗಬೇಕಿತ್ತು. ಹೀಗಾಗಿ ಸತ್ಯ ಅಹಿಂಸೆಗಳ ಗುರಿ ಹಾಗೂ ಧೋರಣೆಯ ವಿಷಯದಲ್ಲಿ ಹೊಂದಿಕೆಯಾಗದೆ, ಗಾಂಧಿಯವರು ವೈಧಾನಿಕವಾಗಿ ಕಾಂಗ್ರೆಸ್ಸಿನಿಂದ ಹೊರಗೆ ಉಳಿದಿದ್ದರೂ, ಕಾಂಗ್ರೆಸ್ಸಿನ ವಿಷಯಕ ಅವರ ಆತ್ಮೀಯ ಭಾವನೆ ಕಡಿಮೆಯಾಗಲಿಲ್ಲ ಕಾಂಗ್ರೆಸ್ಸಿಗೆ ಮಾರ್ಗದರ್ಶನವನ್ನು ಮಾಡುವದನ್ನೂ ಅವರು ಬಿಟ್ಟಿರಲಿಲ್ಲ.

ಆದರೆ ಸ್ವರಾಜ್ಯ ಪ್ರಾಪ್ತಿಯ ತರುವಾಯ ಕಾಂಗ್ರೆಸ್ಸಿಗೆ ಗಾಂಧಿಯವರ ಮಾರ್ಗದರ್ಶನ ತೆಗೆದುಕೊಳ್ಳುವದೂ ಬೇಡವೆನಿಸಹತ್ತಿತ್ತು. ಇತ್ತ ಗಾಂಧಿಯವರೇ ಸ್ಥಾಪಿಸಿದ ಹಲವಾರು ಅಖಿಲ ಭಾರತೀಯ ರಚನಾತ್ಮಕ ಸಂಸ್ಥೆಗಳಿದ್ದರೂ, ಅವು ತಮ್ಮ ತಮ್ಮ ಕರ್ಮಕಾಂಡದಲ್ಲೇ ತೊಡಕಿಕೊಂಡಿದ್ದ ಕಾರಣ, ಗಾಂಧಿಯವರ ಧ್ಯೇಯ ಸಾಧನದ ಹೋರಾಟದಲ್ಲಿ, ಜೀವನ ಮರಣದ ಕೊನೆಯ ಪೇಚಾಟದಲ್ಲಿ, ಗಾಂಧಿಯವರಿಗೆ ಪ್ರತ್ಯಕ್ಷ ಸಹಾಯ ಸಲ್ಲಿಸಲು ಅಸಮರ್ಥವಾದವು.

ಇಂಥ ಇಕ್ಕಟ್ಟಿನ ಪರಿಸ್ಥಿತಿಯಲ್ಲೂ ಗಾಂಧಿಯವರು ಅಭಿಮನ್ಯುವಿನಂತೆ ಏಕಾಕಿಯಾಗಿ, ಭೀಮಪರಾಕ್ರಮದಿಂದ ಹೋರಾಡಿದರು. ಅವರಿಗೆ ತಮ್ಮ ಕಾಲಡಿಯ ನೆಲವೇ ಕುಸಿಯುತ್ತಿರುವಂತೆ ಭಾಸವಾಯಿತು. ಅಖಂಡ ಪರಿಶ್ರಮದಿಂದ ತಾವು ಪೋಷಿಸಿ ಬೆಳೆಸಿದ ಉಚ್ಚ ಆಕಾಂಕ್ಷೆಗಳೆಲ್ಲ, ತಮ್ಮ ಕಣ್ಣು ಮುಂದೆಯೇ, ತಮ್ಮ ಜನರೇ ತುಳಿದು ಮಣ್ಣುಗೂಡಿತ್ತಿರುವದು ನೋಡಲಾರದೆ, ಗಾಂಧಿಯವರು ಬೇಗನೇ ಕಣ್ಣು ಮುಚ್ಚಲು ಅಪೇಕ್ಷಿಸಿದರು. ಮತ್ತು ತಮ್ಮನ್ನು ಬೇಗನೇ ಕರೆದೊಯ್ಯುವಂತೆ ದೇವರಲ್ಲಿ ಪ್ರಾರ್ಥಿಸಿರೆಂದು ತಮ್ಮ ದೇಶ ಬಾಂಧವರನ್ನು ಕೇಳಿಕೊಂಡರು.

ಈ ಅವರ ಕೊನೆಯ ಅಪೇಕ್ಷೆಯನ್ನು ಮಾತ್ರ ಅಕ್ಷರಶಃ ಪೂರ್ತಿಗೊಳಿಸಿ ಅವರನ್ನು ದೇವರ ಕಡೆಗೆ ಕಳಿಸಿ ಕೊಟ್ಟು, ಅವರ ದೇಶಬಾಂಧವರು ಧನ್ಯರಾದರು ಕೃತಕೃತ್ಯರಾದರು!

ಗಾಂಧಿಯವರ ಜೀವನದೊಂದಿಗೆ, ಗಾಂಧಿಯವರ ಕನಸಿನ ರಾಮರಾಜ್ಯವೂ ನವಸಮಾಜರಚನೆಯೂ ಅಳ್ಳಿಗೆ ನಿಂತಿತು. ದಿನದಿನಕ್ಕೆ ಹೆಚ್ಚು ಹೆಚ್ಚು ಮಸುಕಾಗುತ್ತ ನಡೆಯಿತು. ಉಪಹಾಸ್ಯದ ಮಾತಾಗಹತ್ತಿತ್ತು!

ಇಂದು ಗಾಂಧೀಯವರ ಹೆಸರು ಮಾತ್ರ ಉಳಿದಿದೆ. ಆಳುವ ವರ್ಗದಲ್ಲಿ ಪ್ರತಿಷ್ಠೆಯ ಕರುಹು ಆಗಿ, ಶೋಷಣದ ಸಾಧನವಾಗಿ ಮತ್ತು ಪ್ರತಿಪಕ್ಷದವರ ಕೈಯಲ್ಲಿ ಆಳುವ ಪಕ್ಷದ ಮೇಲೆ ಬೀಸಲು ಅನುಕೂಲವಾದ ದೊಣ್ಣೆಯಾಗಿ! ಅಂತೂ ಇಂದು ರಾಜಕೀಯ ಕ್ಷೇತ್ರದಲ್ಲಿ ಗಾಂಧಿ ಹೆಸರಿಗೆ ಶೋಷಣದ ಹಾಗೂ (ಪ್ರಹಾರದ) ದೊಣ್ಣೆಯ ಸ್ಥಾನಮಾತ್ರ ಪ್ರಾಪ್ತವಾಗಿದೆ! — "ಭೂ"

---

ಸಂಪತ್ತಿನ ಮದದ ಹಾಸಿಗೆಯಲ್ಲಿ ಅನೇಕ ರಾಷ್ಟ್ರಗಳೇ ನಾಶಗೊಂಡಿವೆ. ಮತ್ತೆ ಮನುಷ್ಯನ ಕತೆ ಕೇಳಬೇಕೆ?

—ಯಂಗ್

---

## ಭಿಕ್ಷುಕರ- ಲೋಕಾನುಭಾವ!

ಅದೊಂದು ಅಪೂರ್ವ ದೃಶ್ಯ
ಭಿಕ್ಷುಕರ ದಾರುಣ ದೃಶ್ಯ
ಮನಕರಗುವ ಆರ್ತನಾದ
ಬಿದ್ದು—ಬಿದ್ದು ಹಿಡಿದೆಳೆವರು ಪಾದ!

ಅರೆ ಬತ್ತಲೆ ಮೈ,
ಜಡ ಜಡಕಲು ಕೈ!
ಹೊಂಗೆದ್ದೆಡೆ ಮೂಳೆ!
ಎದೆಗೆಸೆಯುವ ಶೂಲೆ!

ಕುಂಟ, ಕುರುಡ, ಹೆಳವ ಕುಬ್ಜರು
ಸಾಲುಗಟ್ಟಿ ಅಲ್ಲಿ ಕುಳಿತಿರುವರು
ಎದೆಯ ಮರುಕ ಕೆರಳಿಸುವವರು
ಅಂಗಲಾಚಿ ಬೇಡುತಿರುವರು

ಇವರಿಲ್ಲದ ನಗರವಿಲ್ಲ ಊರಿಲ್ಲ
ಬಸ್ಸು ನಿಲ್ದಾಣ ಸಿನೇಮಾ ನಾಟಕ
ಮಂದಿರ
ಭಿಕ್ಷುಕರ ಬೀಡು ನಮ್ಮೀ ನಾಡು!
ಒಂದೂರಿನ ನೀರು ಕುಡಿದ
ಬಾಯಿಯೋ?

ಒಂದು ಮನೆಯ ಹಿಟ್ಟು ತಿಂದ
ಹೊಟ್ಟೆಯೋ?
ಹಳಸಿದನ್ನವೇ ನೆಗಲಿ ಬಿಸಿ ಹೋಳಿಗೆ
— ಲಭಿಸಲಿ ಹರ್ಷದಿಂದ ಅವರ ಪಾಲಿಗೆ
ಒಂದೇ ರೀತಿಯ ರುಚಿಕಂಡ
ನಾಲಗೆಯೋ?
ಒಂದೇ ಬಗೆಯ ನೋಟ ಕಂಡ ಕಣ್ಣೋ?
ಅತಿ ವಿಶಾಲ ಅತಿ ಆಳ ಅತಿ ಪ್ರಶಸ್ತ
ಶ್ರೇಷ್ಠ!
ಭಿಕ್ಷುಕರ ಲೋಕಾನುಭಾವ ಪುಷ್ಪ!
—"ಮಲ್ಲಾರಿ"

---

## ಶಿಕ್ಷಣದ ಮಾಧ್ಯಮವು ರಾಜ್ಯಭಾಷೆಗಳಲ್ಲಿ

(ಐದನೇ ಪುಟದಿಂದ)

ನಿಮ್ಮ ಪ್ರಸಿದ್ಧ ವಿಜ್ಞಾನಿಗಳು, ಅರ್ಥಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು ಮುಂತಾದ ಅನೇಕ ಮಹನೀಯರು ಪರದೇಶದವರು. ಅವರ ಎಲ್ಲಾ ಗ್ರಂಥ, ತತ್ವಗಳಿರುವುದು ಹೆಚ್ಚಾಗಿ ಇಂಗ್ಲಿಷ್ ಭಾಷೆಯಲ್ಲಿ ಅಥವಾ ಇಂಗ್ಲಿಷ್ ಭಾಷಾಂತರಗಳಲ್ಲಿ. ನಮ್ಮ ಶಿಕ್ಷಣದ ಮಾಧ್ಯಮವು ಬದಲಾದರೆ ನಾವು ಅವುಗಳನ್ನು ನಮ್ಮದೇಶದಎಲ್ಲಾರಾಜ್ಯಭಾಷೆಗಳಲ್ಲಿ ಭಾಷಾಂತರಿಸಬೇಕಾಗುವುದು. ಒಂದು ವೇಳೆ ಸರ್ವ ಪ್ರಯತ್ನಗಳಿಂದ ಭಾಷಾಂತರವಾದರೂ ನಮ್ಮ ದೇಶದ ಶಬ್ದ ಭಂಡಾರದ ನ್ಯೂನತೆಯಿಂದ ಹೆಚ್ಚಿನ ಪದಗಳಿಲ್ಲವೂ ಪ್ರತಿಯೊಂದು ಭಾಷೆಯಲ್ಲಿ ಬರೆದ ಇಂಗ್ಲಿಷಿನ ಶಬ್ದಗಳೇ ಆಗಬೇಕಾದುವುದು. ಈಗಾಗಲೇ ಬಹು ಸಂಖ್ಯೆಗಳಲ್ಲಿ ಇದನ್ನು ನಾವು ನಮ್ಮ ಪಠ್ಯ ಪುಸ್ತಕಗಳಲ್ಲಿ ಕಾಣಬಹುದು. ಇನ್ನು ಮುಂದಕ್ಕೆ ಇದು ಅಭಿವೃದ್ಧಿಸಿ ಒಂದು ಫ್ಯಾಶನ್ ರೂಪಕ್ಕೂ ಬರಬಹುದು. ಇದರಿಂದಾಗಿ ನಮ್ಮ ವಿದ್ಯಾಭ್ಯಾಸವು ಇನ್ನೂ ಅಪಮೌಲ್ಯಗೊಳಗಾಗಬಹುದು.

ಭಾಷಾಂತರ ಮಾಡುವುದೂ ಒಂದು ಸಾಮಾನ್ಯ ಕೆಲಸವಲ್ಲ. ಇದಕ್ಕಾಗಿ ಹಲವು ಕೋಟಿ ರೂಪಾಯಿಗಳು ವೆಚ್ಚಮಾಡಬೇಕಾಗುತ್ತದೆ. ಈ ವೆಚ್ಚವು ಅನುತ್ಪಾದಕವೆಂದು ಹೇಳಬಹುದು. ಕಾಲ ಕ್ರಮೇಣ ಇದೂ ಒಂದು ಹಣದ ಉಬ್ಬರಕ್ಕೆ ಉತ್ತೇಜನಕೊಡಬಹುದು.

ಶಿಕ್ಷಣದ ಮಾಧ್ಯಮವು ರಾಜ್ಯ ಭಾಷೆಯಲ್ಲೇ ಆದರೆ ನಮ್ಮ ದೇಶದ ಮುಖಂಡರು ಮತ್ತು ಶ್ರೀಮಂತ ವರ್ಗದವರು ಅವರ ಪೀಳಿಗೆಯವರನ್ನು ಅವರ 'ಉದ್ಧಾರ'ಕ್ಕೋಸ್ಕರ ಪರದೇಶಗಳಿಗೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಕಳುಹಿಸಬಹುದು. ಇದನ್ನು ಈಗಾಗಲೇ ಕಂಡುಕೊಂಡಿದ್ದೇವೆ—ಭಾರತದ ಈಗಿನ ಪ್ರಧಾನಿಯವರ ಪುತ್ರರಿಬ್ಬರಿಗೂ ಭಾರತದಲ್ಲೇ ಕಲಿಯಲು ಸೀಟು ಸಿಕ್ಕಲಿಲ್ಲವೇನೋ ಪಾಪ! ಈ ವಿದ್ಯಮಾನವು ಇನ್ನೂ ಮುಂದಕ್ಕೆ ವೃದ್ಧಿಸಿದರೆ ಆಶ್ಚರ್ಯವೇನಿಲ್ಲ.

ಪೂರ್ವದಲ್ಲಿ ರಾಷ್ಟ್ರಭಾಷೆಯ ಗೊಂದಲವೆದ್ದಿತ್ತು, ರಾಷ್ಟ್ರ ಭಾಷೆಯು ಹಿಂದಿಯಾಗಬೇಕೆಂದು ಕೆಲವು ಮುಖಂಡರು ಅಭಿಪ್ರಾಯಪಟ್ಟರು. ಆದರೆ ಅವರು ಪ್ರಥಮವಾಗಿ ತಮ್ಮ ದೇಶದ ಜನತೆಯ ಬಹುಮತವನ್ನು ಪಡೆಯಲಿಲ್ಲ. ರಾಷ್ಟ್ರ ಭಾಷೆಯು ಹಿಂದಿ ಎಂದು ಸಾರಿದ್ದೇ ತಡ, ಅದರಿಂದ ಉಂಟಾದ ಪ್ರತಿಕ್ರಿಯೆಯು ವರ್ಣನಾತೀತ. ಆ ದೃಶ್ಯಗಳು ಈಗಲೂ ಕಣ್ಣೆದುರಿನಲ್ಲಿ ನಿಲ್ಲುತ್ತವೆ. ಶಿಕ್ಷಣದ ಮಾಧ್ಯಮವು ಆಯಾ ರಾಜ್ಯಭಾಷೆಗಳಲ್ಲೇ ಆದರೆ ಇನ್ನಾವ ಅನಾಹುತಗಳು ಕಾದಿವೆಯೋ ಯಾರು ಬಲ್ಲರು? ಇಂಥಾ ಒಂದೊಂದು ಕಾರಣಗಳೂ ವಿದ್ಯಾರ್ಥಿಗಳನ್ನು ರಾಜಕೀಯ ರಂಗಕ್ಕೆಳೆಯಲು ಪ್ರಬೋದಿಸುದಿಲ್ಲವೇ?

ನಮ್ಮ ಮೈಸೂರಿನ ವಿಷಯ ತೆಗೆದುಕೊಂಡರೆ ರಾಜ್ಯದ ಬಹು ಸಂಖ್ಯೆಯ ಜನರಿಗೆ ಪ್ರತಿಯೊಂದು ಕಾಲೇಜಿನ ವಿದ್ಯಾರ್ಥಿಗಳಿಗೆ ಮಾತ್ರವಲ್ಲ ಊರಿನ ಜನತೆಗೂ ಕನ್ನಡವು ಮಾಧ್ಯಮವಾಗಲು ಇಷ್ಟವಿಲ್ಲ. ಆದ್ದರಿಂದ ನಮ್ಮ ರಾಜ್ಯವು ಮೊದಲಾಗಿ ಜನರ ಅಭಿಪ್ರಾಯವನ್ನು ತೆಗೆದುಕೊಳ್ಳುವುದು ಒಳ್ಳೆಯದು.

ನಮ್ಮ ದೇಶದ ಪರಿಸ್ಥಿತಿಗಳ ಕಡೆಗೆ ದೃಷ್ಟಿ ಹರಿಯಿಸಿದರೆ ನಮ್ಮ ಮುಖಂಡರೂ, ಕೆಲವು ಮುಖ್ಯಸ್ಥರೂ ಇಂಥಾ ಅಲ್ಪ ತಲೆ ಹರಟೆಯ ವಿಷಯಗಳಿಗೆ ತಲೆ ಖರ್ಚ ಮಾಡುವುದರ ಬದಲಾಗಿ, ದೇಶದ ಏಳಿಗೆಗಾಗಿ, ಅಭಿವೃದ್ಧಿಗಾಗಿ, ಸಮೃದ್ಧಿಗಾಗಿ ಯಾವ ಸಮಸ್ಯೆಗಳನ್ನು ಕೈಕೊಳ್ಳಬೇಕೋ—(ಆಹಾರ ಸಮಸ್ಯೆ, ಆಹಾರ ಧಾನ್ಯಗಳ ಬೆಲೆ ನಿಯಂತ್ರಿಸುವುದು ಮುಂತಾದುವುಗಳು) ಅಂಥ ಸಮಸ್ಯೆಗಳ ಕಡೆಗೆ ಗಮನ ಹರಿಯಿಸಿದರೆ ನಮ್ಮ ಜನರ ಕಷ್ಟಗಳೂ ಪರಿಹಾರವಾಗಿ ದೇಶದ ಪ್ರಗತಿಯಾದರೂ ಆಗಬಹುದು. ಇದರ ಬದಲಾಗಿ ಇಂಥ ಸಮಸ್ಯೆಗಳನ್ನು ಎಬ್ಬಿಸಿದರೆ ದೇಶದಲ್ಲಿ ಇದ್ದ ಬದ್ದ ಶಾಂತಿಗೂ ಭಂಗ ಬರುವುದು. ದೇಶದ ಒಕ್ಕಟ್ಟಿಗೂ ಕಂಟಕಪ್ರಾಯವಾಗುವುದು. ಕಾಲಕ್ರಮೇಣ ಅನೇಕ ಭಾಷಾಸೇನೆಗಳು ಉದ್ಭವಿಸಿ ದೇಶದೊಳಗೇ ತಿಕ್ಕಾಟ ಪ್ರಾರಂಭವಾಗಬಹುದು. ಇಂಥ ಪರಿಸ್ಥಿತಿಗಳನ್ನು ಎದುರು ನೋಡುತ್ತಿದ್ದ ನಮ್ಮ ವೈರಿಗಳು ತಮ್ಮ ಸುಸಂದರ್ಭವನ್ನು ಆಗಲೂ ಬಿಡುವರೆ?

---

## ನಮ್ಮ ಚಂದಾದಾರರಲ್ಲಿ ನಮ್ರ ವಿನಂತಿ

ಇದೇ ಕಳೆದ ಆಗೋಸ್ತು ತಿಂಗಳಾಂತ್ಯಕ್ಕೆ "ನವಯುಗ"ದ 46ನೇ ವರ್ಷವು ಕೊನೆಗೊಂಡು ಸಪ್ಟಂಬರಾದಿಯಿಂದ 47ನೇ ಹೊಸ ವರ್ಷಾರಂಭವಾಗಿದೆ. ಈ ಅವಧಿಗೆ ಚಂದಾ ಅವಧಿ ಮುಗಿಯುವ ಹಾಗೂ ಚಂದಾ ಹಣ ಬಾಕಿಯಿರುವ ನಮ್ಮ ಚಂದಾದಾರ ಬಂಧುಗಳು ತಮ್ಮ ಚಂದಾ ಹಣವನ್ನು ದಯಮಾಡಿ ಆದಷ್ಟು ತ್ವರ್ಯ ಮನಿಯಾರ್ಡರು ಮೂಲಕ ಯಾ ಸಿಂಡಿಕೇಟ್ ಬ್ಯಾಂಕಿನ ಸಮೀಪದ ಶಾಖೆಯಲ್ಲಿ "ನವಯುಗ"ದ ಖಾತೆಗೆ ಜಮೆ ಮಾಡುವುದರ ಮೂಲಕ ಕಳುಹಿಸಿಕೊಟ್ಟು ಸಹಕರಿಸುವಂತೆ ವಿನಂತಿಸುತ್ತೇವೆ.

ಅಂತೂ ಚಂದಾ ಹಣವು ಸಕಾಲದಲ್ಲಿ ಬಾರದಿದ್ದಲ್ಲಿ ನಾವು ಕ್ರಮಶಃ ಮುಂದಿನ ಸಂಚಿಕೆಯನ್ನು ವಿ. ಪಿ. ಮೂಲಕ ಕಳುಹಿಸುತ್ತೇವೆ. ಅದನ್ನು ಅವಶ್ಯ ಸ್ವೀಕರಿಸಿ ಸಹಕರಿಸುವಂತೆ ಭಿನ್ನಹಿಸುತ್ತೇವೆ.

ಮೆನೇಜರ್,

ನವಯುಗ, ಉಡುಪಿ.

---

## ಬಾಪು ದೇವರೂರ ಸೋಪು!

ಲೇಖಕರು: ಶ್ರೀ ಬಸವರಾಜ ಕುಂಚೂರು

ಜಗದ ಕರುಣೆ ತನ್ನ ಬೊಮ್ಮಕ್ಕಳ ಮೇಲೆ ಸೈಭಾರ ಹಾಕಿ ಪ್ರಾರ್ಥನೆ ಮಂದಿರದಿಂದ ನಡೆದು ಬರುತಿತ್ತು. ಎಲ್ಲಿಂದಲೋ ಇದ್ದಕ್ಕಿದ್ದ ಹಾಗೆ ಢಂ, ಢಂ, ಎಂಬ ಶಬ್ದ ಕೇಳಿತು ಅಷ್ಟೆ, ಗುಂಡು, ಮಹಾತ್ಮರ ಪ್ರಾಣಪಕ್ಷಿಯನ್ನು ಹಾರಿಸಿ ಬಿಟ್ಟಿತ್ತು. ರಾಮ! ರಾಮ! ಎಂಬಿಷ್ಟೆ ಕೊನೆಯುಸಿರು, ಜ್ಯೋತಿ ಅಖಂಡ ಪ್ರಭೆಯಲ್ಲಿ ಲೀನವಾಗಿ ಬಿಟ್ಟಿತು. ಮಂದಸ್ಮಿತ ಮುಖದ ಮೇಲೆ ಹರಡಿತ್ತು.

ಯಾರು ಈ ದೇಶಕ್ಕಾಗಿ ತನು, ಮನ, ಧನ ಅರ್ಪಿಸಿ, ಎಲ್ಲ ಅಂತಸ್ತುಗಳನ್ನು ಧಿಕ್ಕರಿಸಿ ರಾಷ್ಟ್ರಕ್ಕಾಗಿಜೀವವನ್ನೇ ತೇಯ್ದು ಸ್ವಾತಂತ್ರ್ಯಕ್ಕಾಗಿ ಜೇಲಿಗೆ ಹೋಗಿ ಲಾಟಿ ಪೆಟ್ಟು ತಿಂದು ಶ್ರೀ ಸಾಮಾನ್ಯನ ಏಳ್ಗೆ ಆಗುವ ವರೆಗೆ ನಾನು ಎಂದೂ, ಮೈತುಂಬ ಬಟ್ಟೆ ತೊಡುವದಿಲ್ಲವೆಂದು ಪ್ರತಿಜ್ಞೆ ಗೈದು, ಆಡಿನ ಹಾಲು, ಕಡಲೆಕಾಯಿಯೇ ಆಹಾರವಾಗಿ ಸೇವಿಸುತ್ತಾ ದೇಶದ ಕೀಳು ಜನತೆಯ ಉದ್ಧಾರವಾಗಬೇಕೆಂದು ಹಗಲಿರುಳು ಪರಿತಪಿಸುತಿದ್ದ ಮಹಾ ಜೀವವನ್ನ ಮಹಾ ಭಾರತೀಯನನ್ನ ಮಹಾತ್ಮನನ್ನ, ಭಾರತೀಯ ಪುತ್ರನೊಬ್ಬನೆ ಗುಂಡಿಟ್ಟನೆಂದು ಚರಿತ್ರೆ ಹೇಳಿದರೆ, ನಮ್ಮ ಮುಂದಿನ ಜನಾಂಗ ನಂಬುತ್ತದೆಯೋ, ಇಲ್ಲವೋ? ಅಂಥ ಕ್ರೂರ ಘಟನೆಯೊಂದು ನಡೆದು ಹೋಯಿತು.

ಮಹಾತ್ಮರು ಮಡಿದು ೧೯ ವರುಷಗಳು ಕಳೆದು ಹೋದುವು. ಅವರು ಹಾಕಿಕೊಟ್ಟ ಪಾಠ, ನಡೆದ ದಾರಿ, ಎಲ್ಲವನ್ನು ಮರೆತು ಬಿಟ್ಟದ್ದೇವೆ. ಸ್ವಾರ್ಥ, ವಂಚನೆ, ಮೋಸಕ್ಕಾಗಿಯೇ ಅವರನ್ನ ಉಪಯೋಗಿಸುತಿದ್ದೇವೆ.

"ಗಾಂಧಿ ಮಾರ್ಗ ಎನ್ನುವದು" ಭಾಷಣ ಬಾಯಿ ಹೇಳಿಕೆಯಲ್ಲಿಯೇ ಸಮಾಪ್ತಿಯಾಗಿದೆ. ಹೂವು ಚೆಲ್ಲಿದ ಅವರ ಹಾದಿಯಲ್ಲಿಯೇ ಇಂದು ಮುಳ್ಳು ಬಿತ್ತುತಿದ್ದೇವೆ. ಜಗತ್ತಿಗೆನೇ ಕೊಡುಗೆಯಾಗಿ ಕೊಟ್ಟ ಅಹಿಂಸಾ ಅಸ್ತ್ರ ಸತ್ಯಾಗ್ರಹವನ್ನ ಇಂದು ಕ್ಷುಲ್ಲಕ ಕಾರಣಕ್ಕಾಗಿ ಬಳಸುತಿದ್ದೇವೆ. ದೇಶದ ಸಾಮಾಜಿಕ ರಾಜಕೀಯ ಜೀವನ ಕಲುಷಿತಗೊಂಡು ರಾಷ್ಟ್ರೀಯತೆ ಮುರಿದು ಬೀಳ ಹತ್ತಿದೆ. ಜಾತಿ, ಮತ, ಪಂಥ, ಭಾಷೆ, ಅನೇಕ ವಿಷ ನೆಗ್ಗಲು ಮುಳ್ಳುಗಳು ಭಾರತೀಯನ ಜೀವನವನ್ನ ಆವರಿಸಿ, ಅಧಪತನಕ್ಕೆ ಇಳಿಸಿ ಬಿಟ್ಟವೆ. "ಐಷಾರಾಮ" ಮನೋವೃತ್ತಿ ಬೆಳೆದು, ಬಡತನದ ರಕ್ಕಸುಗಳ್ಳಿ ಬೆಳೆಯಲಿಕ್ಕೆ ಇನ್ನೂ ನೆರವಾಗಿದೆ.

ಜೀವನದ ಎಲ್ಲ ರಂಗಗಳು ಮಲಿನವಾಗಿ ಬಿಟ್ಟವೆ. ಕೊಳಕು ತುಂಬಿ ಸಹ್ಯ ಬಾಳು ಹೊರಟು ಹೋಗಿದೆ. ಕವಿ ಹಾಡಿದಂತೆ ಈ ಕೊಳಕನ್ನು ತೊಳೆಯಲು "ಆ ದೇವರೂರ ಸೋಪು ಬಾಪು" ಮತ್ತೊಮ್ಮೆ ಜನ್ಮವೆತ್ತ ಬೇಕಾಗಿದೆ.

---

## —: ನುಡಿಮುತ್ತುಗಳು :—

(ಸಂಗ್ರಹ— ಶ್ರೀ ಯು. ಪಿ. ಮಂಜುನಾಥ, ಹರಿಹರಪುರ)

ಕಾಲ ಕೆಟ್ಟಿತೆಂದು ಹೇಳುತ್ತಾರೆ; ಆದರೆ ಕಾಲ ಕೆಡದು. ಅದೇ ಸೂರ್ಯಚಂದ್ರರು, ಅದೇ ಭೂಮಿ, ಅದೇ ಲೋಕ, ಅದೇ ಕಾಲ. ಆದರೆ, ಕೆಡುವುದು ಜನರ ನಡೆನುಡಿ,ಆಚಾರವಿಚಾರಗಳು ಮಾತ್ರ.

—ಸ್ವಾಮಿ ವಿವೇಕಾನಂದ.

ತಪ್ಪುಗಳನ್ನು ಮಾಡಿದವನಿಗೆ ನಂತರ ಅದು ತಪ್ಪೆಂದು ಜ್ಞಾನೋದಯವಾಗುತ್ತದೆ. ಹೀಗೆ ನಮ್ಮ ಇಡೀ ಜೀವಮಾನದಲ್ಲಿ ನಾವು ನಮ್ಮ ತಪ್ಪುಗಳಿಂದಲೇ ಕಲಿಯುತ್ತಿರುತ್ತೇವೆ.

—ಷೆಲ್ಲಿ.

ನಾವು ಟೀಕೆ ಮಾಡುವಷ್ಟು ಬೇರಾವ ಕೆಲಸವನ್ನೂ ಮಾಡುವುದಿಲ್ಲ. ನಾವು ಮಾಡುವ ಪುಣ್ಯದ ವಿಚಾರಗಳೆಲ್ಲ ಇತರರನ್ನು ಟೀಕಿಸುವ ಕಾರ್ಯದಲ್ಲಿ ತೊಳೆದು ಅಳಿದು ಹೋಗುತ್ತದೆಂಬ ಕಲ್ಪನೆ ಸ್ವಲ್ಪವಾದರೂ ಇದ್ದರೆ!

—ಅಲ್ಫ್ರೆಡ್.

ಇತರರ ತಪ್ಪುಗಳನ್ನು ದೊಡ್ಡ ಧ್ವನಿಯಿಂದ ಹೇಳುತ್ತೀ. ನಿನ್ನ ತಪ್ಪುಗಳನ್ನು ಸದಾ ಮುಚ್ಚಿಡಲು ಪ್ರಯತ್ನಿಸುತ್ತೀ. ಮೊದಲು ನಿನ್ನ ತಪ್ಪುಗಳನ್ನು ಒದರಿ ಹೇಳಿ ಕ್ಷಮೆ ಬೇಡು, ಇತರರ ತಪ್ಪುಗಳ ಗೊಡವೆಗೆ ಎಂದಿಗೂ ಹೋಗಬೇಡ. ಹೋದರೆ ನೀನೇ ಆ ತಪ್ಪಿನ ಬಲೆಯಲ್ಲಿ ಸಿಕ್ಕಬಹುದು.

—ಸ್ವಾಮಿ ಚೈತನ್ಯ.

---

## ಎಲ್ಲೆಲ್ಲಿ ಏನೇನು?

### ಕುಡ್ವಿ ವಾಸುದೇವ ಶೆಣೈಯವರಿಗೆ ಸನ್ಮಾನ

ಪ್ರಭಾತ ವಾರಪತ್ರಿಕೆಯ ಸಂಪಾದಕರೂ, ಕರ್ನಾಟಕದ ಸುಪ್ರಸಿದ್ಧ ನಾಟಕಕಾರರೂ ಆಗಿರುವ ಶ್ರೀ ಕುಡ್ವಿ ವಾಸುದೇವ ಶೆಣೈಯವರನ್ನು ಅವರ ಷಷ್ಟ್ಯಬ್ದಿ ಪೂರ್ತಿಗಾಗಿ ಗೌರವಿಸುವ ಸಮಾರಂಭವು ಇದೇ 10ರಂದು ಮಂಗಳೂರಿನ ಮೋಹಿನಿ ವಿಲಾಸದಲ್ಲಿ ಶ್ರೀ ಬೇಲಗದ್ದೆ ಅಪ್ಪಯ್ಯನವರ ಅಧ್ಯಕ್ಷತೆಯಲ್ಲಿ ಜರಗಿತು.

ಲಘೂಪಹಾರದ ನಂತರ ಶ್ರೀ ಎಂ. ಕೃಷ್ಣಗೋಪಾಲರು ಸ್ವಾಗತ ಭಾಷಣ ಮಾಡಿದರು. ಅನಂತರ ಶ್ರೀ ಎಂ. ಬಾಬ ಪೈಯವರು ಅಧ್ಯಕ್ಷರಿಗೂ ಮುಖ್ಯ ಅತಿಥಿಗಳಿಗೂ ಹಾರಾರ್ಪಣೆಗೈದರು. ಸರ್ವಶ್ರೀ ಡಾ| ಎಂ. ಪಿ. ಪೈ,ಎಂ. ಕೃಷ್ಣಗೋಪಾಲ್, ಬಿ. ವಿ. ಬಾಳಿಗಾ, ಕೀಶಾನ ರಾಮಚಂದ್ರ, ಬಿ. ಎಂ. ಇದಿನಬ್ಬ, ಎಸ್. ಆರ್. ಬಾಲಗೋಪಾಲ, ಕೆ. ದೇವದಾಸ್ ನಾಯಕ್, ಎಸ್. ಮುಕುಂದರಾವ್, ಮಂಜುನಾಥ ಶಾಲಿವಾಹನ, ಮತ್ತು ಎಚ್. ಕೃಷ್ಣಪ್ಪ ಶಿಂಗಳಾಯರು ಶ್ರೀ ಶೆಣೈಯವರ ಬಹುಮುಖ ಪ್ರತಿಭೆ, ಅವರು ಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆಗಳ ಕುರಿತು ಮಾತನಾಡಿದರು. ಎಲ್ಲರೂ ಇನ್ನೂ ಹೆಚ್ಚಿನ ಯಶಸ್ಸು, ಕೀರ್ತಿಗಳನ್ನು ಹಾರೈಸುತ್ತಾ ಶ್ರೀ ಶೆಣೈಯವರು ದೀರ್ಘಾಯುರಾರೋಗ್ಯ ಸಂಪನ್ನರಾಗಲಿ ಎಂದು ಹೇಳಿದರು.

ಶ್ರೀ ಶೆಣೈಯವರಿಗೆ ಅಭಿನಂದನೆಗಳನ್ನು ಸಲ್ಲಿಸಿ, ಹಾಗೂ ಸಮಾರಂಭಕ್ಕೆ ಶುಭಕೋರಿ ಬಂದ ಸಂದೇಶಗಳ ವಾಚನವಾದ ಮೇಲೆ ಶ್ರೀ ಶೆಣೈಯವರು ಮಾತನಾಡುತ್ತಾ ತನ್ನ ಸತ್ಕಾರಕ್ಕಾಗಿ ಕೃತಜ್ಞತೆಗಳನ್ನು ಅರ್ಪಿಸಿದರು. ತನಗೆ ಸ್ಫೂರ್ತಿಯಿತ್ತ ಮಾತೆ ಹಾಗೂ ಗುರುವರ್ಯರಾದ ದಿವಂಗತ ಎಂ. ಎನ್. ಕಾಮತರನ್ನು ಸ್ಮರಿಸಿದರು. ಕೊನೆಯಲ್ಲಿ 'ಅಹಂಕಾರಿಯ ಅಹಂಕಾರದ ದರ್ಪಕ್ಕೆ ಈ ಶಿರಮಣಿಯದಿರಲಿ" ಎಂಬ ಶ್ರೀ ಟಾಗೋರರ ಕವನವನ್ನು ಉಲ್ಲೇಖಿಸಿ, ಅದೇ ತನ್ನ ಜೀವನದ ನಿತ್ಯ ಪ್ರಾರ್ಥನೆ ಎಂದು ಹೇಳಿ ತನ್ನ ಭಾಷಣ ಮುಗಿಸಿದರು.

ಅಧ್ಯಕ್ಷರಾದ ಶ್ರೀ ಬೇಲಗದ್ದೆ ಅಪ್ಪಯ್ಯನವರು, ಮಹಾವ್ಯಕ್ತಿಯೊಬ್ಬರ ಸತ್ಕಾರ ಸಮಾರಂಭಕ್ಕೆ ತಾನು ಅಧ್ಯಕ್ಷನಾದುದರಿಂದ ಧನ್ಯನಾದೆನೆಂದು ಹೇಳುತ್ತಾ, ಶ್ರೀ ಶೆಣೈಯವರಿಗೆ ದೀರ್ಘಾಯುರಾರೋಗ್ಯ ಸಂಪತ್ತುಗಳನ್ನು ಕೋರಿದರು. ಕೊನೆಯಲ್ಲಿ ಶ್ರೀ ಎಂ. ಕೃಷ್ಣಗೋಪಾಲರಿಂದ ಧನ್ಯವಾದ ಸಮರ್ಪಣೆಯಾಯಿತು.

### ಉದ್ಘಾಟನಾ ಸಮಾರಂಭ

ಕಿನ್ನಿಗೋಳಿ, ಸ. 16 "ಯುಗಪುರುಷ ಪ್ರಕಟನಾಲಯದ ಪ್ರಕಟಣೆಯಾದ ಶ್ರೀ ಕೆ. ಗಣೇಶ ಮಲ್ಯರ ಕಾದಂಬರಿ 'ಬೀಸಿದ ಬಲೆ" ಈ ಕೃತಿಯನ್ನು ಶ್ರೀ ಕೆ. ಕೆ. ಪೈ, ಚೀಫ್ ಆಫೀಸರ್, ಸಿಂಡಿಕೇಟ್ ಬ್ಯಾಂಕ್, ಮಣಿಪಾಲ ಇವರು ಡಾ| ಯಸ್. ಚಂಪಾ ಇವರ ಅಧ್ಯಕ್ಷತೆಯಲ್ಲಿ ಉದ್ಘಾಟಿಸಿದರು. ಶ್ರೀ ಕೆ. ಗಣೇಶ ಮಲ್ಯರು, ಕೃತಿಯ ಕುರಿತಾಗಿ ಪ್ರಾಸ್ತಾವಿಕ ಭಾಷಣವನ್ನು ಗೈದರು. ಶ್ರೀ. ಕೆ. ಕೆ. ಪೈಯವರು ಮಾನವನ ಮನರಂಜನೆ ಗೈಯುವುದರ ಜೊತೆಗೆ ಮಾನಸಿಕ ವಿಕಾಸವನ್ನೂ ನೆರವೇರಿಸುವ ಸಾಹಿತ್ಯೋದ್ಯಮಕ್ಕಾಗಿ ಸಂತೃಪ್ತಿಯನ್ನು ಸೂಚಿಸಿ, ಶ್ರೀ ಮಲ್ಯರ ಸಾಹಸವನ್ನು ಕೊಂಡಾಡಿ ಅವರಿಗೆ ಉಜ್ವಲ ಭವಿಷ್ಯವನ್ನು ಹಾರೈಸಿದರು. ಶ್ರೀ ರಘುನಾಥ ರಾವ್ ಇವರು "ಕಾದಂಬರಿ'ಯ ವಿಚಾರವಾಗಿ ಮಾತನಾಡಿದರು. ಅಂತ್ಯದಲ್ಲಿ ಶ್ರೀ ಕೊ. ಅ. ಉಡುಪರು ಧನ್ಯವಾದಗಳನ್ನರ್ಪಿಸಿದರು.

### ವಾರ್ಷಿಕ ಸಭೆ

ಪರ್ಕಳ, ಹೆರ್ಗ ಸಹಕಾರಿ ವ್ಯವಸಾಯಿಕ ಬೇಂಕಿನ ವಾರ್ಷಿಕ ಸಭೆಯು 17-9-67 ರಂದು ಬೇಂಕಿನ ಪ್ರೆಸಿಡೆಂಟ್ ಬಿ. ಕೃಷ್ಣಯ್ಯ ಹೆಗ್ಡೆಯವರ ಅಧ್ಯಕ್ಷತೆಯಲ್ಲಿ ಜರಗಿತು. ಸೆಕ್ರೆಟರಿ ಎನ್. ವೇದಮೂರ್ತಿ ಭಟ್ 1966-67 ನೇ ವರ್ಷದ ವರದಿ ಸಭೆಯ ಮುಂದಿಟ್ಟರು. 1967-68 ನೇ ವರ್ಷದ ಬಜೆಟ್ ಎಸ್ಟಿಮೇಟ್, 1965-66 ಲಾಭಾ ಹಂಚುವಿಕೆ ಇತ್ಯಾದಿಗಳು ಮಂಜೂರಾದುವು. ಗ್ರಾಮ ಸೇವಕ ಲಕ್ಷ್ಮೀ ಗೌಡ ಉಪಸ್ಥಿತರಿದ್ದರು. ಸೆಂಟ್ರಲ್ ಬೇಂಕ್ ಸುಪರ್ ವೈಸರ್, ಬೇಂಕಿನ ಟ್ರೇಜರರ್ ಕೆ. ಅನಂದ ಸೆಟ್ಟಿ ಬೇಂಕಿನ ವಿಷಯಗಳನ್ನು ವಿವರಿಸಿದರು.

### ಡಾ॥ ವಿಶ್ವೇಶ್ವರಯ್ಯನವರ ಧ್ಯೇಯಗಳ ಅನುಸರಣೆಗೆ ಕರೆ

ಮಣಿಪಾಲ, ಸ. 16, ಕೀರ್ತಿಶೇಷ ಡಾ॥ ಎಂ. ವಿಶ್ವೇಶ್ವರಯ್ಯನವರ ಆದರ್ಶವನ್ನು ಅನುಕರಿಸಿ ಹಾಗೂ ಸ್ಥಳೀಯ ಸೌಲಭ್ಯಗಳನ್ನು ಉಪಯೋಗಿಸಿಕೊಂಡು ಒಟ್ಟಾಗಿ ಕೆಲಸ ಮಾಡುವುದರ ಮೂಲಕ ಮಹತ್ವಪೂರ್ಣ ಸಾಧನೆಗಳನ್ನು ಮಾಡಬೇಕೆಂದು ಅಖಿಲ ಭಾರತ ತಯಾರಿಕೆಗಾರರ ಸಂಸ್ಥೆಯ ದಕ್ಷಿಣ ಕನ್ನಡ ಜಿಲ್ಲಾ ಮಂಡಳಿಯ ಅಧ್ಯಕ್ಷ ಡಾ॥ ಟಿ. ಎಂ. ಎ. ಪೈಯವರು ನಿನ್ನೆ ಇಲ್ಲಿ ವಿದ್ಯಾರ್ಥಿಗಳಿಗೆ ಕಳಕಳಿಯ ಕರೆಯಿತ್ತರು.

'ಕಳೆದ ಎರಡು ಶತಮಾನಗಳಲ್ಲಿ ನಮ್ಮ ದೇಶದಲ್ಲಿ ಅನುಪಯುಕ್ತ ಹಾಗೂ ಉಪದ್ರವಿ ಅಂಶಗಳು ಉಂಟಾದವು ಈಗ ಇರುವ ಆರ್ಥಿಕ ಹಿಂಜರಿತದ ಭಯ ಕೇವಲ ಎಣಿಕೆಯದಾಗಿದೆ" ಎಂದು ಅವರು ಮಣಿಪಾಲ ಇಂಜಿನಿಯರಿಂಗ್ ಕಾಲೇಜಿನಲ್ಲಿ ಆ ಕಾಲೇಜಿನ ಹಾಗೂ ಅ. ಭಾ. ತ. ಸಂಸ್ಥೆಯ ದ. ಕ. ಜಿಲ್ಲಾ ಮಂಡಳಿಯ ಆಶ್ರಯದಲ್ಲಿ ಇಂಜಿನಿಯರುಗಳ ದಿನ ಹಾಗೂ ಡಾ| ಎಂ. ವಿ. ಯವರ ೧೦೭ನೇ ಜನ್ಮ ದಿನ ಆಚರಣಾ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ ತಿಳಿಸಿದರು.

ಪ್ರಿನ್ಸಿಪಾಲ್ ಶ್ರೀ ಪಿ. ವಿ. ಭಟ್‌ರವರು ಕಾಲೇಜಿನ ಸಿವಿಲ್ ಇಂಜಿನಿಯರಿಂಗ್ ಸಂಘವನ್ನು ಉದ್ಘಾಟಿಸುತ್ತಾ ಸಿವಿಲ್ ಇಂಜಿನಿಯರಿಂಗ್ ಪದವೀಧರರು ನಿರುದ್ಯೋಗದ ಭಯ ಇಟ್ಟುಕೊಳ್ಳಬೇಕಾಗಿಲ್ಲವೆಂದು ಹೇಳಿ ವಿದ್ಯಾರ್ಥಿಗಳಿಗೆ ಮುಂದೆ ಸಾಕಷ್ಟು ಅವಕಾಶಗಳಿರುತ್ತವೆಂದರು.

ಅ. ಭಾ. ತ. ಸಂಸ್ಥೆಯ ದ. ಕ. ಜಿಲ್ಲಾ ಮಂಡಳಿಯ ಕಾರ್ಯದರ್ಶಿ ಶ್ರೀ ಟಿ. ರಮೇಶ ಯು. ಪೈಯವರು 'ಡಾ॥ ಎಂ. ವಿ."ಯವರನ್ನು ಕುರಿತ ವಾಕ್ ಸ್ಪರ್ಧೆಯಲ್ಲಿ ಬಹುಮಾನಗಳಿಸಿದ ಶ್ರೀ ಪಿ. ಆರ್. ಭಟ್‌ರವರನ್ನು ಅಭಿನಂದಿಸಿದರು.

ಶ್ರೀ ಎನ್. ರಾಮಕೃಷ್ಣ ಶೆಟ್ಟಿಯವರು ಅತಿಥಿಗಳನ್ನು ಸ್ವಾಗತಿಸಿದರು. ಸಿವಿಲ್ ಇಂಜಿನಿಯರಿಂಗ್ ಸಂಘದ ಅಧ್ಯಕ್ಷ ಪ್ರೊ॥ ಎಚ್. ಎಸ್. ಶಿವಸ್ವಾಮಿಯವರು ಭಾಷಣ ಮಾಡಿದರು. ಕಾಲೇಜು ಸಂಘದ ಕಾರ್ಯದರ್ಶಿ ಶ್ರೀ ಜೋಸೆಫ್ ಡೇನಿಯಲ್‌ರವರು ಆಭಾರ ಮನ್ನಿಸಿದರು.

### ಎ. ಬಿ. ಶೆಟ್ಟಿ ಸ್ಮಾರಕ ವಿದ್ಯಾರ್ಥಿ ನಿಲಯ

ಮೈಸೂರಿನ ಎ. ಬಿ. ಶೆಟ್ಟಿ ಸ್ಮಾರಕ ವಿದ್ಯಾರ್ಥಿ ನಿಲಯದ ಸಕಲ ಸದಸ್ಯರ ಸಭೆಯು ತಾ. 17-9-67ರಂದು ಬೆಳಿಗ್ಗೆ ನಿಲಯದ ಆವರಣದಲ್ಲಿ ಅಧ್ಯಕ್ಷ ಶ್ರೀ ಕೆ. ದೇಜು ಶೆಟ್ಟರ ಅಧ್ಯಕ್ಷತೆಯಲ್ಲಿ ನಡೆಯಿತು. ಸಭೆ ಹಿಂದಿನ ಸಾಲಿನ ಆಡಳಿತದ ವರದಿ ಹಾಗೂ ಲೆಕ್ಕ ಪತ್ರಗಳನ್ನು ಅಂಗೀಕರಿಸಿತು.

ವಿದ್ಯಾರ್ಥಿ ನಿಲಯಕ್ಕೆ ಸರಕಾರದಿಂದ ಕೊಟ್ಟಿರುವ ಜಾಗದಲ್ಲಿ ಬೇಗನೇ ಕಟ್ಟಡ ಕಟ್ಟಲು ಆರಂಭಿಸ ಬೇಕೆಂದೂ ಕಟ್ಟಡ ನಿಧಿಯನ್ನು ಶೇಖರಿಸಲು ಸೂಕ್ತ ಕಾರ್ಯಕ್ರಮ ಕೈಕೊಳ್ಳಬೇಕೆಂದೂ ತೀರ್ಮಾನಿಸಲಾಯಿತು.

ಮುಂದಿನ ಸಾಲಿಗೆ ಈ ಕೆಳಗೆ ಕಂಡ ಅಧಿಕಾರ ವರ್ಗವನ್ನು ಚುನಾಯಿಸಿತು. ಶ್ರೀಗಳಾದ ಕೆ. ದೇಜು ಶೆಟ್ಟಿ (ಅಧ್ಯಕ್ಷರು) ಎ. ಸಿ. ಶ್ರೀಕಂಠಯ್ಯ (ಉಪಾಧ್ಯಕ್ಷರು) ಎ. ರಾಮಣ್ಣ (ಕಾರ್ಯದರ್ಶಿ) ಎಸ್. ಬೈರಪ್ಪ (ಖಜಾಂಚಿ,) ಕೆ. ಹಿರಿಯಣ್ಣ ಶೆಟ್ಟಿ, ಕೆ. ಶಂಭುಶೆಟ್ಟಿ ಕೊಡಗಳ್ಳಿ ಜಂಭು ಗೌಡ, ಕೆ. ದಿವಾಕರಹೆಗ್ಡೆ, ದಿವಾಕರಹೆಗ್ಡೆ, ಎಸ್. ಟಿ. ವೆಂಕಟಯ್ಯ (ವಾರ್ಡನ್) ದೊಡ್ಡತಮ್ಮಯ್ಯ (ಪುರಸಭಾಸದಸ್ಯರು) ಮತ್ತು ಮೈಸೂರು ಜಿಲ್ಲೆಯ ವಿದ್ಯಾಧಿಕಾರಿಗಳು ಸದಸ್ಯರು.

### ಶ್ರೀ ಧರ್ಮಸ್ಥಳ ಹೆಗ್ಗಡೆಯವರ ಪಟ್ಟದ ವರ್ಧಂತಿ

ಶ್ರೀ ಧರ್ಮಸ್ಥಳ ರತ್ನವರ್ಮಹೆಗ್ಗಡೆಯವರ ಪಟ್ಟದ ವರ್ಧಂತಿ ಉತ್ಸವವು ಬೆಂಗಳೂರಿನ ಶ್ರೀ ರಾಜಗೋಪಾಲ್‌ರವರ ಅಧ್ಯಕ್ಷತೆಯಲ್ಲಿ ತಾ. 15ರಂದು ಧರ್ಮಸ್ಥಳದ ರತ್ನಮಹಾಲಿನಲ್ಲಿ ನಡೆಯಿತು.

ಆರಂಭದಲ್ಲಿ ಶ್ರೀ ಎ. ರಾಮಣ್ಣ ಶೆಟ್ಟರು ಸ್ವಾಗತಿಸಿದರು. ಶ್ರೀಗಳಾದ ಕೆ. ಸೂರ್ಯನಾರಾಯಣ ರಾವ್, ಶ್ರೀ ಕೊಠಾರಿ, ಜಿನರಾಜ ಶಾಸ್ತ್ರಿ, ಶ್ರೀನಿವಾಸರಾವ್ ಮೊದಲಾದವರು ಹೆಗ್ಗಡೆಯವರನ್ನು ಅಭಿನಂದಿಸಿ ಮಾತನಾಡಿದುದಕ್ಕೆ ಶ್ರೀ ಹೆಗ್ಗಡೆಯವರು ಅದಕ್ಕುತ್ತರವಾಗಿ ಮಾತನಾಡಿ ತನ್ನ ಕಾರ್ಯಭಾರಗಳಿಗೆ ನೌಕರರ ಸಹಕಾರ, ಶ್ರೀ ಸ್ವಾಮಿಯ ಅನುಗ್ರಹಗಳೇ ಆಧಾರವೆಂದು ಹೇಳಿದರು.

ಕೊನೆಯಲ್ಲಿ ಶ್ರೀ ಜಿ. ಸೂರ್ಯನಾರಾಯಣರಾಯರು ಧನ್ಯವಾದ ಸಮರ್ಪಿಸಿದರು. ಕೊನೆಗೆ 'ಸಂಸಾರನೌಕೆ'ವೆಂಬ ನಾಟಕವೂ 'ಸುಭದ್ರಾರ್ಜುನ"ವೆಂಬ ಯಕ್ಷಗಾನ ಕೂಟವೂ ಜರಗಿದವು.

### ವಾರ್ಷಿಕ ಮಹಾಸಭೆ

ಶಿರ್ವ ಸೇವಾ ಸಹಕಾರಿ ಸಂಘದ ವಾರ್ಷಿಕ ಮಹಾಸಭೆಯು ಇತ್ತೀಚೆಗೆ ಡಾ| ಎಮ್. ರಾಜಶೇಖರ ಹೆಗ್ಗಡೆಯವರ ಅಧ್ಯಕ್ಷತೆಯಲ್ಲಿ ಜರಗಿತು. ವರದಿವಾಚನ, ಆಯವ್ಯಯ ಮಂಜೂರಾತಿ, ಕ್ರಮ ನಿಬಂಧನೆಗಳ ತಿದ್ದುಪಡಿ, ಅಧ್ಯಕ್ಷರ ಭಾಷಣನಂತರ ಶ್ರೀ ಕೆ. ವಾಸುದೇವ ಶೆಟ್ಟಿ ಧನ್ಯವಾದವಿತ್ತರು.

ಹೊಸ ಕಾರ್ಯಕಾರಿ ಮಂಡಳಿಯು ಈ ಕೆಳಗಿನ ಸದಸ್ಯರನ್ನೊಳಗೊಂಡಿದೆ:-ಡಾ| ಎಮ್. ರಾಜಶೇಖರ ಹೆಗ್ಡೆ, ಶ್ರೀಯುತರುಗಳಾದ ಕೆ. ವಾಸುದೇವ ಶೆಟ್ಟಿ, ಕೆ. ಕುಮಾರಹೆಗ್ಡೆ, ಎಸ್. ಗೋಪಾಲಹೆಗ್ಡೆ, ಎನ್ ಎಮ್. ಎಲ್ಲಪ್ಪ ಶೆಟ್ಟಿ, ಕೆ. ಎಲ್. ಶರ್ಮ ಮತ್ತು ಕೆ. ಕೃಷ್ಣ ಶೆಟ್ಟಿ.

### ಬೀಳುತ್ತಿರೋದು ಸ್ಟ್ರೀಟ್ ಸ್ಕ್ರೀನ್

(ನಾಲ್ಕನೇ ಪುಟದಿಂದ)

ವ್ಯಕ್ತಪಡಿಸುವುದು ಸಾಧ್ಯ....'

"ಹ್ಞಾಂ... ಕೇರಳದಲ್ಲಿ ಕಮ್ಯುನಿಸ್ಟರನ್ನು ಹೊರಗಿಡುವುದು....'

'ಅವರನ್ನು ಜನರೇ ಹೊರಗಿಡಬೇಕು'

'ಪತ್ರಿಕೆ ನೋಡಿ ಮೊನ್ನೆ ಸರಕಾರದ ಗೋಳಿಬಾರಿನಲ್ಲಿ ಇಬ್ಬರು..."

'ಹೌದು, ಅಗ್ಗಿತ್ತಾಯ ಮತ್ತು ಶೆಣೈ...'

'ಅವ್ರ ಕುಟುಂಬಕ್ಕೆ ಪರಿಹಾರ ನೀಡಲು ನಿರ್ಧರಿಸಿದೆಯಂತೆ...."

"ಕೇರಳ ಸರಕಾರ ಪ್ರಾಣಕ್ಕು ಬೆಲೆ ಕಟ್ಟಿ ತಮ್ಮ ಕೆಂಪು ಗುಣವನ್ನು ತೋರಿಸಿತು....'

"ನೋಡಿ, ಈ ಪರಿಹಾರವನ್ನು ತಿರಸ್ಕರಿಸಬೇಕು...."

"ಉದ್ದೇಶಪೂರ್ವಕ ಗೋಳಿಬಾರು ನಡೆಸಿ, ಅದನ್ನು ಮರಮಾಜಲು ಆಡುವ ಈ ನಂಬೂದರಿ ನಾಟಕಕ್ಕೆ ಅಂಕದ ಪರದೆ ಬೀಳಬೇಕು...'

"ಎಲ್ಲವೂ ನಾಟಕವೇ. ಬೀಳುತ್ತಿರುವುದು ಸ್ಟ್ರೀಟ್ ಸ್ಕ್ರೀನ್....'

'ಅಯ್ಯೋ..."

'ಏನೇ ಅದು?'

"ಏನೂ ಇಲ್ಲಾನ್ನಿ...."

—ಗೋರಾ.

## ಇದು ಸುಳ್ಳೆನ್ನ ಬೇಡಿರಿ

# ಯಾಂತ್ರಿಕ ಶಿಕ್ಷಕರ ನಿಯುಕ್ತಿ

ಒಂದು ದಿನ ಅಧ್ಯಾಪಕರು ತಪ್ಪು ಲೆಕ್ಕ ಮಾಡಿಕೊಂಡು ಬಂದ ಹುಡುಗನನ್ನು ಗದರಿಸುತ್ತ ಹೇಳಿದರು— "ಬೆಂಚೀ ಮೇಲೆ ಏರೋ...." ಆಗ ಆ ಹುಡುಗ ಅಂದನಂತೆ—'ನಾನಲ್ಲ ಸಾರ್' 'ಏನಂದೆ? ನೀನಲ್ಲ? ಮತ್ಯಾರು ನಾನು ಏರಬೇಕೇನೋ' ಎಂದು ಗುಡುಗಿದಾಗ, ಹುಡುಗ ಮೆಲ್ಲನೆ ಉತ್ತರಿಸಿದ— 'ಅಲ್ಲ ಸಾರ್, ಲೆಕ್ಕ ತಪ್ಪಾಗಿ ಮಾಡಿದ್ದು ನಾನಲ್ಲ ಸಾರ್, ನಮ್ಮಪ್ಪ' ಎಂದು ಬಿಟ್ಟ.

ಮನೆಲೆಕ್ಕ, ಮನೆ ಅಭ್ಯಾಸವೆಲ್ಲ ಮಕ್ಕಳಿಗೊಂದು ತಲೆ ಶೂಲೆ. ಕಲಿಯಬೇಕಾದ್ದನ್ನೆಲ್ಲಾ ಶಾಲೆಯಲ್ಲೇ ಮುಗಿಸಿ ಬಿಡಬೇಕು. ಮನೆಯಲ್ಲಿ ಗರಿಗೆದರಿ ಹಾರುವುದಕ್ಕೆ ಪೂರ್ಣ ಅವಕಾಶದೊರೆಯಬೇಕು-ಇದು ಮಕ್ಕಳ ಹೇರಾಸೆ.ಹೆಚ್ಚಿನ ಮಕ್ಕಳಿಗೆ ಮನೆಪಾಠವೆಂದರೆ ಭೇದಿ ಔಷಧ ಕುಡಿದಂತೆ ಆಗಿ ಬಿಡುತ್ತದೆ. ಉಪಾಧ್ಯಾಯರು ಸುಮ್ಮನಿರುವುದುಂಟೆ? ಹೇಳಿದ ಕೆಲಸವನ್ನು ಮಾಡಿಕೊಂಡು ಬರಬೇಕು— ಇದು ಅವರ ತತ್ವ—ಅವರಾದರೂ ಏನು ಮಾಡಿಯಾರು? ಕರ್ತವ್ಯ ಭಾವನೆಯುಳಿದಿರುವುದಾದರೂ ಇಂದು ತುಸು ಮಟ್ಟಿಗೆ ಅವರ ವರ್ಗದಲ್ಲಿ ಮಾತ್ರ ತಾನೆ? ದಸರಾ ರಜೆ—ಕ್ರಿಸ್‌ಮಸ್ ರಜೆಯಿರಲಿ, ಅವರ ಮನೆಪಾಠ ತಪ್ಪಿದ್ದಲ್ಲ. ಆದುದರಿಂದ, ಚಕ್ರವ್ಯೂಹವನ್ನು ಹೊಕ್ಕು ಹೊರ ಬರಲರಿಯದ ಅಭಿಮನ್ಯುವಿನಂತೆ ಮಕ್ಕಳು ಉಪಾಧ್ಯಾಯರ ಹೆದರಿಕೆಗಾಗಿ ಪುಸ್ತಕಗಳನ್ನು ಹರಡಿಟ್ಟು,ತಲೆ ಕೆಡಿಸಿಕೊಳ್ಳುತ್ತಾರೆ. ಈ ಹುಡುಗರಿಗೂ ಅಭಿಮನ್ಯುವಿಗೂ ಹೆಚ್ಚಿನ ವ್ಯತ್ಯಾಸವಿರುವುದಿಲ್ಲ.

ಕೆಲವು ಭಾಗ್ಯಶಾಲಿ ಹುಡುಗರೂ ಇದ್ದಾರೆ. ಅಣ್ಣ, ಅಪ್ಪ, ಅಕ್ಕ, ಅಮ್ಮ ಮೊದಲಾದವರು ಆಪದ್ಬಾಂಧವರಂತೆ ಪ್ರತ್ಯಕ್ಷರಾಗಿ ಅವರು ಚಕ್ರವ್ಯೂಹದಿಂದ ಹೊರಗೆಳೆಯಲು ಸಹಾಯ ಮಾಡುವರು. ಆದರೆ, ಎಲ್ಲರಿಗೂ ಈ ಭಾಗ್ಯ ಎಲ್ಲಿಂದ ಬರಬೇಕು? ಈ ಆಪದ್ಬಾಂಧವರಿಗೆ ಅಕ್ಷರಾಭ್ಯಾಸ ಗೊತ್ತಿರಬೇಕು; ಬಿಡುವಿರಬೇಕು; ಹುಡುಗನ ದಯನೀಯ ಸ್ಥಿತಿಯು ಮನವರಿಕೆಯಾಗಬೇಕು— ಇವೆಲ್ಲವೂ ಸರಿಹೊಂದಿದರೆ ಲೆಕ್ಕ ಮಾಡುವ ರೀತಿ ಸರಿಯಾಗಿ ಗೊತ್ತಿರಬೇಕು!

ಹಿರಿಯರು ಕಿರಿಯರ ಮುಂದೆ ತಾವೆಲ್ಲ ತಮ್ಮ ಕಾಲದ ಬೃಹಸ್ಪತಿಗಳೆಂದೇ ಹೇಳಿಕೊಳ್ಳುತ್ತಾರೆ. ಆದರೆ, ಸತ್ಯಸ್ಥಿತಿ ಇದಕ್ಕಿಂತ ದೂರವೆಂಬುದು ಹಾಲಿನಷ್ಟು ಬೆಳ್ಳಗೆ. ಅತ್ತೆಯಂದಿರ ಅವತಾರ ಸತ್ಯಯುಗದಲ್ಲೇ, ಆದರೆ, ಅವರ ಸೊಸೆಯಂದಿರು ಜನ್ಮ ತಾಳುವುದು ಕಲಿಯುಗದಲ್ಲಿ! ಒಂದು ತಲೆಮಾರಿನಲ್ಲೇ ಇಷ್ಟೊಂದು ಅಂತರ!

ಆದುದರಿಂದಲೇ ಹಿರಿಯರು ಕಿರಿಯರ ಗೋಜಿಗೆ ಹೋಗುವುದಿಲ್ಲ. ತುಸು ಹೇಳಿಕೊಡಣ್ಣಾ ಅಂತ ರಾಗವೆಳೆದರೆ, 'ಈಗ ಬಿಡುವಿಲ್ಲ ಕಣೋ" ಎಂದು ಜಾರಿಕೊಳ್ಳುವ ಅಣ್ಣ — ಅಕ್ಕಂದಿರೇ ಹೆಚ್ಚು! ತನಗೆ ಗೊತ್ತಿಲ್ಲ ಅಂದರೂ ಉರಿಮೋರೆಯ ಆ ಸೆಡವಿನ ಉತ್ತರ ತಾನು ಬೃಹಸ್ಪತಿಯೆಂಬುದನ್ನೇ ಸಮರ್ಥಿಸುವಂತಿರುತ್ತದೆ. ಇನ್ನು ಮಾಡಿಕೊಟ್ಟರೂ ಆದ....? ತಮ್ಮ ಕಾಲದಲ್ಲಿ ತಮ್ಮ ಕಾಲ ಮೇಲೆ ನಿಲ್ಲಲಾಗದ, ತಮ್ಮ ಮನೆ ಕೆಲಸವನ್ನು ಸರಿಯಾಗಿ ಮಾಡಲಾಗದ ಈ ಬೃಹಸ್ಪತಿಗಳ ಲೆಕ್ಕ ಹೇಗಾದೀತು! ಪಾಪ, ಹುಡುಗ ದಂಡನೆಯಿಂದ ಉಳಿಯಲು ನಿರುಪಾಯನಾಗಿ ಸತ್ಯ ಭೇದಿಸಲೇ ಬೇಕಾಗುತ್ತದೆ! ಆಗ ಅಧ್ಯಾಪಕರ ಮುಖ ನೋಡಬೇಕು!

ಈ ಬಗೆಯ ಸಮಸ್ಯೆಗೆ ಪರಿಹಾರವರಸಬೇಕು. ಮಕ್ಕಳು ಸರಿಯಾಗಿ ಲೆಕ್ಕ ಮಾಡಲು ನೆರವಾಗುವ ಶಿಕ್ಷಣ ಕ್ರಮವೊಂದು ಪಶ್ಚಿಮ ಜರ್ಮನಿಯಲ್ಲಿ ಪ್ರಾಯೋಗಿಕಾವಸ್ಥೆಯಲ್ಲಿದೆ. ಒಂದು ಮಾದರಿಯ ಲೆಕ್ಕವನ್ನು ಅಧ್ಯಾಪಕರು ಬಿಡಿಸುತ್ತಿರುವಾಗಲೇ ಅದನ್ನು "ಟೇಪ್ ರೆಕಾರ್ಡ್" ಮಾಡಿಕೊಳ್ಳುತ್ತಾರೆ. ಇದೇ ಪಾಠದ ಮೇಲೆ ಮನೆ ಲೆಕ್ಕ ಕೊಟ್ಟಾಗ ಬುದ್ಧಿವಂತ ಮಕ್ಕಳು ಮಾಡಿತರಬಹುದು; ಇನ್ನು, ಲೆಕ್ಕ ಮಾಡಿತರಲಾಗದವರಿಗೆ ಟೇಪ್ ರೆಕಾರ್ಡರಿನ ಸಹಾಯ ನೀಡುತ್ತಾರೆ. ಅವರು ಸರಿಯಾಗಿ ಅರ್ಥ ಮಾಡಿಕೊಳ್ಳುವಷ್ಟು ಬಾರಿಯೂ ಈ ರೆಕಾರ್ಡರ್ ಅವರಿಗೆ ಪಾಠ ಹೇಳುವುದು. ಒಮ್ಮೆ ಹೇಳಿದ್ದನ್ನು ಇನ್ನೊಮ್ಮೆ ಹೇಳುವುದೆಂದರೆ ಮಾನವ—ಅಧ್ಯಾಪಕನಿಗೆ ಬೇಸರ. ಏನು ಸಾರ್ ಎಂದು ಯಾವನಾದರೂ ಮತ್ತೆ ಕೇಳಿ ಬಿಟ್ಟರೆ, ತೀರಿತು— ರುದ್ರಾವತಾರಯಾಗುವವರೇ ಹೆಚ್ಚು ಮಂದಿ ವಿದ್ಯಾರ್ಥಿಗಳ ಒತ್ತಡದಿಂದಾಗಿ ಹತ್ತಿಯಂತಹ ಅವರ ಮನಸ್ಸು ಕಲ್ಲಿನಷ್ಟು ಗಟ್ಟಿಯಾಗಿರುವುದೇ ಇದಕ್ಕೆ ಕಾರಣ.

ಪಶ್ಚಿಮ ಜರ್ಮನಿಯ ಟ್ಯೂಬಿಂಜೆನ್ ವಿಶ್ವವಿದ್ಯಾಲಯದಲ್ಲಿ ಮೂರುಬಂದೂವರೆಲಕ್ಷ ರೂಪಾಯಿಯ ವೆಚ್ಚದಲ್ಲಿ "ಟೇಪ್ ರೆಕಾರ್ಡ್ ಶಿಕ್ಷಕ"ನನ್ನು ನೇಮಿಸಿಕೊಳ್ಳಲಾಗಿದೆ. ಇವನಿಂದ ಏನು ಲಾಭ? ಇವನು ಸಮರ್ಪಕವಾಗಿ, ಹುಡುಗನಿಗೆ ಮಂದಟ್ಟಾಗುವಂತೆ ಪಾಠ ಹೇಳಿ ಕೊಡಬಲ್ಲನೆ? ಹೇಳಲು ಬರುವುದಿಲ್ಲ. ಆದರೂ ಈ ಯಾಂತ್ರಿಕ ಶಿಕ್ಷಕನಿಗೆ ಹೇಳಿದ್ದನ್ನೇ ಹೇಳಿ ಬೇಸರ ಬರುವುದಿಲ್ಲ; ಸಿಟ್ಟು ಬರುವುದು ಬಹಳ ಅಪರೂಪ. ಕೇಳುವ ತಾಳ್ಮೆ ಹುಡುಗನಲ್ಲಿದ್ದರೆ, ಆತ ಕಲಿತುಕೊಳ್ಳುವ ಸಾಧ್ಯತೆಯಿದೆ. ಬೇರೆಯವರಿಂದ ನಕಲು ಹೊಡೆಯುವುದಕ್ಕಿಂತ ಇದು ಲೇಸು.

ಆದರೆ, ನೆನಪಿಡಿ, ತಾನು ಕಲಿತುಕೊಳ್ಳಬೇಕು ಎಂಬ ಆಸಕ್ತಿ ಹುಡುಗನಲ್ಲಿರಬೇಕು. ಎದೆಗುಂಡಿಗೆಯಿಲ್ಲದವನಿಗೆ ರಕ್ತದಾನ ಮಾಡುವುದೆಂತು?

(ಮೂರನೇ ಪುಟದಿಂದ)

ಪದವಿ ವರ್ಗಕ್ಕೂ ವಿಸ್ತರಿಸುವುದಾಗಿ ಹೇಳಿ, ಈ ಬಗ್ಗೆ ಪಠ್ಯ ಪುಸ್ತಕಗಳ ರಚನೆಯಾಗುತ್ತಿದೆಯೆಂದರು. ಹಾಗೆಯೇ ವಿಶ್ವವಿದ್ಯಾಲಯ ಮಾಧ್ಯಮವು ಕನ್ನಡವಾಗುವಾಗ ರಾಜ್ಯ ಸರಕಾರದ ಅಧಿಕೃತ ಭಾಷೆ ಕನ್ನಡವಾಗ ಬೇಡವೆ? ಎಂಬವರ ಪ್ರಶ್ನೆ—ಅಲ್ಲ, ಬಯಕೆ. ನಾವು ಈ ಹಿಂದೆಯೇ ಈ ಬಗ್ಗೆ ಒತ್ತಾಯ ಪಡಿಸಿದ್ದೇವೆ. ರಾಜ್ಯ ಸರಕಾರವು ತ್ರಿಭಾಷಾ ಸೂತ್ರವನ್ನು ಒಪ್ಪಿಕೊಂಡಿದೆ. ಹಿಂದೀ ದೇಶದ ಅಧಿಕೃತ ಭಾಷೆಯಾಗಬೇಕೆಂಬುದನ್ನು ಪ್ರತಿಪಾದಿಸುವಾಗ ಕನ್ನಡವನ್ನು ರಾಜ್ಯ ಸರಕಾರದ ಅಧಿಕೃತ ಭಾಷೆಯನ್ನಾಗಿ ಎಲ್ಲಾ ಹಂತಗಳಲ್ಲಿಯೂ ವ್ಯವಹಾರಕ್ಕೆ ತರುವ ಅಗತ್ಯವಿದ್ದೇ ಇದೆ.

---



## ಕುಟುಂಬ ಯೋಜನಾ ಪಕ್ಷ ಉದ್ಘಾಟನೆ

ಮಣಿಪಾಲ, ಭಾರತದ ಕುಟುಂಬ ಯೋಜನಾ ಸಂಘದ ದ. ಕ. ಜಿಲ್ಲಾ ಶಾಖೆಯ ಆಶ್ರಯದಲ್ಲಿ ತಾ. 16ರಂದು ಮಣಿಪಾಲದಲ್ಲಿ ಕುಟುಂಬ ಯೋಜನಾ ಪಕ್ಷದ ಉದ್ಘಾಟನೆಯು ಜಿಲ್ಲಾಧಿಕಾರಿ ಶ್ರೀ ಎಚ್. ಎಲ್. ನಾಗೇಗೌಡರಿಂದ ಡಾ| ಟಿ. ಮಾಧವ ಪೈಗಳ ಅಧ್ಯಕ್ಷತೆಯಲ್ಲಿ ನಡೆಯಿತು.

ಆರಂಭದಲ್ಲಿ ಕಾರ್ಯದರ್ಶಿ ಶ್ರೀ ಟಿ. ರಮೇಶ ಪೈಗಳು ಸ್ವಾಗತಿಸುತ್ತಾ ಭಾರತದಂತಹ ಹಿಂದುಳಿದ ರಾಷ್ಟ್ರವು ಜನಸಂಖ್ಯೆಯ ಸಮಸ್ಯೆಯನ್ನು ಅವಶ್ಯವಾಗಿ ಬಗೆಹರಿಸ ಬೇಕಾಗಿದೆಯೆಂದರು. ಡಾ| ಎ. ಕೃಷ್ಣರಾಯರು ಸಂದೇಶಗಳನ್ನು ಓದಿದರು.

ಸಭಿಕರ ಪರವಾಗಿ ಕೊಡಗಿನ ಶ್ರೀಮತಿ ದೇವಕಿಯವರು ಮಾತನಾಡಿದ ಮೇಲೆ ಡಾ| (ಶ್ರೀಮತಿ) ಪದ್ಮಾರಾವ್ ಧನ್ಯವಾದ ಸಮರ್ಪಿಸಿದರು.

## ಕುಟುಂಬ ಯೋಜನಾ ವಸ್ತುಪ್ರದರ್ಶನ

ಕುಟುಂಬಯೋಜನಾ ಪಕ್ಷಾಚರಣೆಯ ಅಂಗವಾಗಿ ಉಡುಪಿಯ ರೋಟರಿ ಹಾಲಿನಲ್ಲಿ ಏರ್ಪಡಿಸಲಾದ ವಸ್ತು ಪ್ರದರ್ಶನದ ಉದ್ಘಾಟನೆಯು ತಾ. 17ರಂದು ಜಿಲ್ಲಾ ವೈದ್ಯಾಧಿಕಾರಿ ಡಾ| ಎ. ಡಿ. ಪಾಲ್‌ರವರಿಂದ ಡಾ| ಟಿ ಮಾಧವ ಪೈಗಳವರ ಅಧ್ಯಕ್ಷತೆಯಲ್ಲಿ ಜರಗಿತು.

ಶ್ರೀ ಟಿ. ರಮೇಶ ಪೈಗಳು ಸ್ವಾಗತಿಸಿ ಮಣಿಪಾಲ ಕೇಂದ್ರದಿಂದ ಉಡುಪಿ ಹಾಗೂ ಆ ಸುಪಾಸಿನ ಸ್ಥಳಗಳಲ್ಲಿ ನಡೆಸಿರುವ ಕಾರ್ಯಕ್ರಮಗಳನ್ನು ವಿವರಿಸಿದರು.

ಶ್ರೀಮತಿ ಕಲ್ಯಾಣಿ ಡಿ. ಶೆಟ್ಟಿಯವರು ಪ್ರಕಾಶದ ಕುಟುಂಬಯೋಜನಾ ಪುತ್ತಳಿಯನ್ನು ಉದ್ಘಾಟಿಸಿ ಕುಟುಂಬಯೋಜನೆಯನ್ನು ಸಾಮಾಜಿಕ ದೃಷ್ಟಿಯಿಂದ ನೋಡಬೇಕೇ ಹೊರತು ಧಾರ್ಮಿಕ ರಾಜಕೀಯವನ್ನು ಇಲ್ಲಿ ತರಬಾರದು ಎಂದರು.

ಡಾ| ಮಾಧವ ಪೈಗಳು ಮಾತನಾಡುತ್ತಾ ನಮ್ಮ ದೇಶದ ಹಾಗೂ ಕುಟುಂಬದ ಕಲ್ಯಾಣಕ್ಕಾಗಿ ಪ್ರತಿಯೊಬ್ಬನೂ ಈ ಸಮಸ್ಯೆಯನ್ನು ಎದುರಿಸಲು ತನ್ನ ಪಾಲಿನ ಸೇವೆಯನ್ನು ಸಲ್ಲಿಸಲು ಸಿದ್ಧನಾಗಿರಬೇಕೆಂದರು.

ಕೊನೆಯಲ್ಲಿ ಶ್ರೀ ಎ. ಜೆ ಆಲ್ಸೆಯವರಿಂದ ಧನ್ಯವಾದ ಸಮರ್ಪಣೆಯಾಯಿತು. ಕುಟುಂಬಯೋಜನೆಗೆ ಸಂಬಂಧಿಸಿದ ಚಲಚಿತ್ರ ಪ್ರದರ್ಶನವನ್ನು ಅಲ್ಪನಾ ಥಿಯೇಟರಿನಲ್ಲಿ ಏರ್ಪಡಿಸಲಾಗಿತ್ತು.

## ಶ್ರೀ ಕೆ. ಸೀತಾರಾಮರಾಯರಿಗೆ ಅನುಗ್ರಹ ಪತ್ರಿಕೆ

ಮದ್ರಾಸಿನಲ್ಲಿ ಚಾತುರ್ಮಾಸ್ಯ ದೀಕ್ಷೆಯನ್ನು ಮುಳುಬಾಗಲು ಶ್ರೀಪಾದರಾಜ ಮಠದ ಶ್ರೀ ೧೦೮ ಸತ್ಯನಿಧಿತೀರ್ಥ ಶ್ರೀಪಾದಂಗಳವರು ತಾ. 18—9—1967ರಲ್ಲಿ ಚಾತುರ್ಮಾಸ್ಯ ದೀಕ್ಷೆಯನ್ನು ಮುಕ್ತಾಯಗೊಳಿಸಿದರು. ಅಂದು ಸಂಜೆ ದೊಡ್ಡ ಸಭೆಯನ್ನೇರ್ಪಡಿಸಿ ಧರ್ಮದ ರಹಸ್ಯವನ್ನು ಭಕ್ತರಿಗೆ ಉಪದೇಶ ಮಾಡುತ್ತಾ, ಪರಮಾತ್ಮನಲ್ಲಿ ದೃಢವಾದ ಭಕ್ತಿಯನ್ನು ಮಾಡಬೇಕೆಂದೂ ಅದರಲ್ಲಿ ಪಾರಮಾರ್ಥಿಕ ಭಾವವು ಪೂರ್ಣವಾಗಿರಬೇಕೆಂದೂ ಒತ್ತಿ ಹೇಳಿದರು. ಭಕ್ತ ಶ್ರೀ ಗೋವಿಂದದಾಸರಲ್ಲಿಯೂ, ಅವರ ಮಕ್ಕಳಾದ ಮದ್ರಾಸ್ ದಾಸಪ್ರಕಾಶ ಮತ್ತು ಧರ್ಮಪ್ರಕಾಶ ನಿಮೂ ತ್ತಗಳಾದ ಶ್ರೀ ಕೆ. ಸೀತಾರಾಮರಾಯರಲ್ಲಿಯೂ ಸಕಲ ಯತಿಗಳಲ್ಲಿಯೂ, ವಿದ್ವಜ್ಜನರಲ್ಲಿಯೂ ಇರುವ ಅಸದೃಶ ಪ್ರೀತಿಯಿಂದ ಸಂತುಷ್ಟರಾಗಿ ಅವರಿಗೆ "ಯತಿ ವಿದ್ವಜ್ಜನ ಪ್ರಿಯ" ಎಂಬ ಬಿರುದನ್ನು ಕೊಟ್ಟು, ಅನುಗ್ರಹ ಪತ್ರಿಕೆಯೊಡನೆ, ಸುವರ್ಣಪದಕವನ್ನು ದಯಪಾಲಿಸಿದರು. ತನ್ನ ತಾಯಿಯವರಾದ ಶ್ರೀಮತಿ ಶತಾಯುಷಿ ಗಂಗಾಬಾಯಿಯವರಿಗೆ ತಾ. 22—9—67ರಿಂದ ತಾ. 3—10—67ರ ವರೆಗೆ ಮಾಡಿಸಲಿರುವ ಬದರೀನಾರಾಯಣ ಯಾತ್ರೆಯು ನಿರ್ವಿಘ್ನವಾಗಿ ನಡೆಯಲೆಂದೂ ಆಶೀರ್ವದಿಸಿದರು. ಶ್ರೀ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರಿಂದ ಧನ್ಯವಾದ ಸಮರ್ಪಣೆ ನಡೆದು ಸಭೆಯು ಮುಕ್ತಾಯವಾಯಿತು.

## ಅಮ್ಮುಂಜೆ ನಾರಾಯಣ ನಾಯಕರ ನಿಧನ

ಉಡುಪಿಯ ಪೂಜಿನಗರಸಭಾಸದಸ್ಯರೂ ಪ್ರಸಿದ್ಧ ವ್ಯಾಪಾರಿಗಳೂ ಆದ ಅಮ್ಮುಂಜೆ ನಾರಾಯಣ ನಾಯಕರು ತಾ. 8ರಂದು ಹೃತ್ಕ್ರಿಯೆ ನಿಂತು ಕುಂಜಿಬೆಟ್ಟಿನ ಸ್ವಗೃಹದಲ್ಲಿ ೬೮ನೇ ಪ್ರಾಯದಲ್ಲಿ ನಿಧನರಾದರೆನ್ನಲು ವಿಷಾದವಾಗುತ್ತದೆ ದಿವಂಗತರು ಸಾರ್ವಜನಿಕ ಕೆಲಸಗಾರರಾಗಿ ಜನಪ್ರಿಯತೆ ಗಳಿಸಿದ್ದರು.

## ಆಯುರ್ವೇದ ತಜ್ಞರ ವಿಚಾರಗೋಷ್ಠಿ.

ಆಯುರ್ವೇದ ತಜ್ಞರ ಹಾಗೂ ವೈದ್ಯರ ಸೆಮಿನಾರ್, ಕುಟುಂಬ ಯೋಜನಾ ಪಕ್ಷದ ಅಂಗವಾಗಿ ಆಯುರ್ವೇದ ಕಾಲೇಜಿನ ಪ್ರಿನ್ಸಿಪಾಲ್ ಡಾ| ವಿಜಯೇಂದ್ರ ಮೂರ್ತಿಯವರ ಅಧ್ಯಕ್ಷತೆಯಲ್ಲಿ ಉಡುಪಿಯ ರೋಟರಿ ಹಾಲಿನಲ್ಲಿ ತಾ. 17ರಂದು ಜರಗಿತು. ಶ್ರೀ ಎ. ಜೆ. ಆಲ್ಸೆಯವರು ಸೆಮಿನಾರಿನ ಉದ್ದೇಶವನ್ನು ವಿವರಿಸಿದರು. ಡಾ| ಉ. ಜಿ. ಗೋಪೀನಾಥರಾಯರು ಆಯುರ್ವೇದದಲ್ಲಿ ಮಿತಸಂತತಿಗೆ ಯೋಗ್ಯ ವಿಧಾನ ಕಂಡು ಹುಡುಕುವುದು ಅವಶ್ಯವೆಂದರು.

ಪ್ರೊ. ಗುರುರಾಜ ಆಚಾರ್ಯ, ಡಾ| ಯು. ಕೆ. ಆಚಾರ್ಯ, ಡಾ| ಕೆ. ಆರ್. ಭಾಗವತ್, ಮುಕುಂದ ಭಟ್, ನಾರಾಯಣ ಶಾಸ್ತ್ರಿ, ಚಂದ್ರ ಶೇಖರ್, ಕೆ. ಆರ್ ಪುರಾಣಿಕ, ಕವಿರಾಜ ಎಂ. ಜಿ. ಶೆಣೈ, ವಿ. ಎಸ್. ತೊಗುನಾಸಿ ಮೊದಲಾದವರು ಚರ್ಚೆಯಲ್ಲಿ ಭಾಗವಹಿಸಿದ್ದರು. ಅಧ್ಯಕ್ಷರ ಭಾಷಣದ ನಂತರ ಶ್ರೀ ಟಿ. ರಮೇಶ ಪೈಗಳು ವಂದನೆಗಳನ್ನರ್ಪಿಸಿದರು.

# ಪ್ರೇಮಬಂಧನ

(ಎರಡನೇ ಪುಟದಿಂದ)

ಳನ್ನು ಅವರೇ ತೆಗೆದು ಕೊಂಡು ಓದಿಕೊಂಡು ನಿಮಗೆ ಯಾವ ಸುದ್ದಿಯನ್ನೂ ತಿಳಿಸಿಲ್ಲ...ನಿನ್ನ ಮನಸ್ಸಿಗೆ ನೋವಾಗುವುದೆಂದು, ನಿನಗೆ ಹೇಗೆ ತಿಳಿಯ ಬೇಕು...ಅವರು ಹತ್ತು ಪತ್ರ ಬರೆದರೂ ನಿನಗೆ ತಲುಪಿದರಷ್ಟೇ ನೀನು ಉತ್ತರಿಸುವುದು...ಅವಳು ನಿನಗೆ ಸರಿಯಾದ ಜೊತೆ....ಎಷ್ಟಾದರೂ ಪ್ರೀತಿಯ ಪತ್ನಿ" ಎಂದ ಷರೀಫ್.

"ಅವಳನ್ನೇ ವಿಚಾರಿಸುತ್ತೇನೆ'

"ಬೆಹೆನ್‌ಗೂ ತಂದೆ-ತಾಯಿ- ಬಂಧು ಬಳಗ ನೋಡಬೇಕೆಂಬ ಆಸೆ ಇರಬಹುದು ...ಕೆಲದಿನ ರಜೆ ತೆಗೆದು ಕೊಂಡು ಏಕೆ ಬೊಂಬಾಯಿಗೆ ಬರಬಾರದು....ನೀವಿಬ್ಬರು ಬಂದರೆ ಎಲ್ಲರಿಗೂ ಸಂತೋಷ'

"ಸರಿ ಷರೀಫ್'

'ಹಾಗಾದರೆ ಬೊಂಬಾಯಿಗೆ ಪ್ರಯಾಣ'

"ಯೋಚಿಸಬೇಕು'

"ಯೋಚಿಸುವುದು ಬೇಡ ಒಂದೆರಡು ದಿನಗಳಲ್ಲಿಯೇ ಹೊರಟುಬಿಡಿ. ಮುಂದಿನ ಭೇಟಿ ಬೊಂಬಾಯಿಯಲ್ಲಿಯೇ ಆಗಲಿ ....ಅಂದ ಹಾಗೆ ಒಂದು ವಾರ ಕಾಯುವುದಾದರೆ ನಾನೂ ಬರುತ್ತೇನೆ' ಎಂದ ಷರೀಫ್.

'ಇಲ್ಲ ಷರೀಫ್ ಜಾಗ್ರತೆಯಾಗಿಯೇ ಹೊರಡುತ್ತೇವೆ"

"Correct Brother" ಎಂದ ಷರೀಫ್.

ಗೆಳೆಯರಿಬ್ಬರೂ ಕಾರಿನ ಕಡೆಗೆ ನಡೆದರು.

o o o o

ರಜನಿ ಪತ್ರ ಮುಚ್ಚಿಟ್ಟ ಕಾರಣ ಗೋಪಿಗೆ ಮನಸ್ತಾಪವಾಯಿತು. ಮನದಲ್ಲಿ ಮೂಡಿದ್ದ ಸಂದೇಹ ಮರೆಯಾಗಿತ್ತು. "ಅನ್ಯಾಯವಾಗಿ ಅವಳ ಮನನೋಯಿಸಿದೆ; ಹಾಗೆ ಮಾಡಬಾರದಿತ್ತು—"ಎಂದು ಮರುಗಿದ ಗೋಪಿ.

ರಜನಿ ಅಳುತ್ತಾ ಮಂಚದ ಮೇಲೆ ಮಲಗಿದ್ದಳು.

ರಾಜಮ್ಮನವರಿಗೆ ಮಗನ ಒರಟುತನದಿಂದ ಕೋಪ ಬಂದಿತ್ತು.

ರಾಜಮ್ಮ ಮನೆಯ ಮುಂದಿನ ಹೂದೋಟದಲ್ಲಿ ಕಲ್ಲು ಬೆಂಚಿನ ಮೇಲೆ ಕುಳಿತಿದ್ದರು, "ಇದೇನಮ್ಮ ಇಲ್ಲಿ ಕೂತಿದ್ದೀಯಾ" ಎನ್ನುತ್ತಲೇ ಗೋಪಿ ಒಳಕ್ಕೆ ಬಂದ.

"ನೀನು ಕಟುಕ ಕಣೋ. ಪಾಪ, ಆ ಹುಡುಗಿ ಕಣ್ಣೀರಿಡುತ್ತಾ ಮಲಗಿದೆ"

"ಮಾಡಿದ ತಪ್ಪಿಗೆ ಶಿಕ್ಷೆ ಅನುಭವಿಸಬೇಕಮ್ಮ'

"ಸಾರ್ಥಕವಾಯ್ತಪ್ಪ'

"ನಾನು ಅವಳು ನಾಡದ್ದು ಬೊಂಬಾಯಿಗೆ ಹೊರಡುತ್ತೇವಮ್ಮ"

"ಬುದ್ಧಿ ಸರಿಯಾಗಿದೆ ಏನೋ ಗೋಪಿ'

"ಹೂನಮ್ಮ" ಎಂದ ಗೋಪಿ ತಾಯಿಗೆ ಎಲ್ಲ ಸಂಗತಿಯನ್ನು ವಿವರಿಸಿದ.

'ಅಯ್ಯೋ ಪಾಪ" ಎಂದು ನೊಂದು ನುಡಿದರು ರಾಜಮ್ಮ.

'ಏನಿದ್ದರು ಗುಟ್ಟಾಗಿರಲಮ್ಮ. ಮುದ್ದು ಸೊಸೆ ಅಂತ ಗುಟ್ಟು ತಿಳಿಸಿದರೆ...'

"ಹುಡುಗು ಬುದ್ಧಿ ಬಿಡಲಿಲ್ಲವಲ್ಲೋ ಗೋಪಿ' ಎಂದು ನಕ್ಕರು ರಾಜಮ್ಮ.

o o o o

ಗೋಪಿ ಹೆಚ್ಚಿನ ವ್ಯಾಸಂಗಕ್ಕೆ ಬೊಂಬಾಯಿಗೆ ತೆರಳಿದ್ದ. ವಸತಿಯ ಅನಾನುಕೂಲತೆಯಿಂದ ತೊಳಲಾಡುತ್ತಿರುವಾಗ ದೂರದ ಬಂಧು ಕೇಶವ ಮೂರ್ತಿಯವರ ಮನೆಯಲ್ಲಿ ಕೋಣೆ ದೊರೆಯಿತು. ಕೆಲ ದಿನಗಳಲ್ಲಿಯೇ ಗೋಪಿ ಅವರ ಮನೆಯವರಲ್ಲೊಬ್ಬನಾದ. ರಜನಿ ಕೇಶವಮೂರ್ತಿಯವರ ಒಬ್ಬಳೇ ಮಗಳು.

ಗೋಪಿ—ರಜನಿ ಇವರಲ್ಲಿ ಬೆಳೆದ ಗೆಳೆತನ ಅವರ ವಿವಾಹದಲ್ಲಿ ಮುಗಿಯಿತು. ಅವರ ದಾಂಪತ್ಯ ಜೀವನ ಆರಂಭವಾಯಿತು.

ರಜನಿ ಪತಿಯನ್ನಗಲಿ ಒಂದು ಕ್ಷಣವೂ ಇರಲಾರದಾಗಿದ್ದಳು. ಅವಳ ಪಾಲಿಗೆ ಗೋಪಿ ಸರ್ವಸ್ವ. ಪತಿಯನ್ನು ಬಿಟ್ಟು ತೌರಿಗೆ ಹೋಗಲಾರದೆ ತಂದೆ-ತಾಯಿಯವರ ಆಗ್ರಹಕ್ಕೆ ಗುರಿಯಾಗಿದ್ದಳು. ರಜನಿಯ ಮನಸ್ಸನ್ನು ಗೋಪಿ ಪೂರ್ಣವಾಗಿ ಅರಿತಿದ್ದ. ಆದರೆ ರಜನಿ ತಂದೆ ಬರೆದಿರುವ ಪತ್ರ ಪತಿಯ ಮನಸ್ಸಿಗೆ ನೋವುಂಟು ಮಾಡುವುದೆಂದು ಕೊಡದಿದ್ದಾಗ ಗೋಪಿ ವಿನಾಕಾರಣವಾಗಿ ಸಂದೇಹ ತಾಳಿ, ಒರಟಾಗಿ ವರ್ತಿಸಿದ್ದ.

o o o

ರಜನಿಯ ಹೃದಯ ಹರಿದು ಹೋಗಿತ್ತು. ಎಷ್ಟು ತಡೆದರೂ ಕಣ್ಣೀರು ಹರಿದು ಬರುತ್ತಿತ್ತು. ಭೂಮಿ ಬಾಯಿ ತೆರೆದು ನುಂಗ ಬಾರದೆ ಎನ್ನುತ್ತಿತ್ತು ಅವಳ ನೊಂದ ಹೃದಯ. ರಜನಿಯ ನೊಂದ ಮುಖವನ್ನು ಕಂಡೂ ಕಾಣದವನಂತೆ ಅವಳೊಂದಿಗೆ ಪ್ರಯಾಣ ಬೆಳೆಸಿದ್ದ ಗೋಪಿ.

ರೈಲು ಬೊಂಬಾಯಿಯ ಕಡೆಗೆ ವೇಗದಿಂದ ಸಾಗುತ್ತಿತ್ತು.

"ವೇಗದಿಂದ ಓಡುತ್ತಿದ್ದ ರೈಲಿನಿಂದ ಹಾರಿ ಬಿಡಲೆ" ಎಂದು ಯೋಚಿಸಿದಳು ರಜನಿ. ಅವಳ ಹೃದಯ ಭಯದಿಂದ ನಡುಗಿತು.

ಬೊಂಬಾಯಿ ನಿಲ್ದಾಣವನ್ನು ಸಮೀಪಿಸಿದ್ದಾಗ ರಜನಿ ಆಯಾಸದಿಂದ ಗೋಪಿಯ ಭುಜಕ್ಕೆ ಒರಗಿ ಮಲಗಿದ್ದಳು. 'ಬೊಂಬಾಯಿ ಬಂತು ರಜನಿ' ಎಂದ ಗೋಪಿ.

ಗೋಪಿ ಪತ್ನಿಯೊಂದಿಗೆ ಮಾವನ ಮನೆಗೆ ಬಂದ. ಮನೆಯವರಿಗೆಲ್ಲ ಆಶ್ಚರ್ಯವಾಗಿತ್ತು.

ರಜನಿಯನ್ನು ಕಂಡೊಡನೆಯೇ ಹೆತ್ತ ಕರುಳು ಮರುಗಿತು.

"ಇದೇನೇ ಇಷ್ಟೊಂದು ಇಳಿದು ಹೋಗಿದ್ದೀಯ—ನಿನ್ನನ್ನು ನೋಡಿದರೆ ಕರುಳು ಕಿತ್ತು ಬರುತ್ತದೆ'' ಎಂದರು ಅವಳ ತಾಯಿ ಮಮತೆಯಿಂದ.

"ರೈಲು ಪ್ರಯಾಣನಮ್ಮ'

"ಚೆನ್ನಾಗಿದ್ದೀಯಾ ಗೋಪಿ" ಎಂದು ಕೇಶವ ಮೂರ್ತಿ ಅಳಿಯನನ್ನು ಪ್ರಶ್ನಿಸಿದರು.

'ಇನ್ನು ಹದಿನೈದು ದಿನಗಳ ವರೆಗೆ ಇಬ್ಬರೂ ಇರುತ್ತೇವೆ" ಎಂದ ಗೋಪಿ.

ರಜನಿ ಆಶ್ಚರ್ಯದಿಂದ ಗೋಪಿಯ ಕಡೆಗೆ ನೋಡಿದಳು.

"ತೌರುಮನೆ ತಲುಪಿದೆನೆಂದು ನನ್ನನ್ನು ಮರೆತು ಬಿಡಬೇಡ ರಜನಿ' ಎಂದ ಗೋಪಿ.

ರಜನಿಯ ಮುಖ ಅರುಣೋದಯದ ನಸುಗೆಂಪನ್ನು ನಾಚಿಸಿತು.

---

# ಊಟದ ಕ್ರಮಗಳೆಷ್ಟಿವೆ?

ಅಲ್ಲಲ್ಲಿನ ಊಟದ ಕ್ರಮಗಳನ್ನು ಶ್ರೀ ಸ್ವಾಮಿ ವಿವೇಕಾನಂದರು ಹೀಗೆ ತಿಳಿಸಿದ್ದಾರೆ:—

ಆರ್ಯರು ಊಟ ಮಾಡುವ ಸಮಯದಲ್ಲಿ 'ಪದ್ಮಾಸನ' ಹಾಕಿಕೊಂಡು ಒಂದು ಮಣೆಯ ಮೇಲೆ ಕುಳಿತುಕೊಳ್ಳುತ್ತಿದ್ದರು. ಒರಗಿ ಕೊಳ್ಳುವುದಕ್ಕೆ ಹಿಂದೆ ಒಂದು ಮಣೆ. ಊಟ ಮಾಡುವುದಕ್ಕೆ ಒಂದು ಲೋಹದ ತಟ್ಟೆಯನ್ನು ಒಂದು ಮಣೆಯ ಮೇಲೆ ಇಡುತ್ತಿದ್ದರು. ಈ ಅಭ್ಯಾಸ ಪಂಜಾಬ್, ರಾಜಪುತ್ರಸ್ಥಾನ, ಮಹಾರಾಷ್ಟ್ರ ಮತ್ತು ಗುಜರಾತಿನಲ್ಲಿ ಈಗಲೂ ಇದೆ. ಬಂಗಾಳ, ಒರಿಸ್ಸಾ, ಆಂಧ್ರರು ಮತ್ತು ಮಲೆಯಾಳಿಗಳು ಊಟದ ತಟ್ಟೆಯನ್ನು ಮಣೆಯ ಮೇಲೆ ಇಡುವುದಿಲ್ಲ. ಅದರ ಬದಲು ಬಾಳೆಯ ಎಲೆಯನ್ನು ಅಥವಾ ತಟ್ಟೆಯನ್ನು ನೆಲದ ಮೇಲೆ ಉಪಯೋಗಿಸುವರು. ಮೈಸೂರು ಮಹಾರಾಜರು ಕೂಡಾ ಹೀಗೆಯೇ ಮಾಡುವರು.

ಮಹಮ್ಮದೀಯರು ಊಟ ಮಾಡುವಾಗ ದೊಡ್ಡ ಬಿಳಿಯ ಬಟ್ಟೆಯ ಮೇಲೆ ಕುಳಿತುಕೊಳ್ಳುವರು. ಬರ್ಮೀಯರು ಮತ್ತು ಜಪಾನೀಯರು ಊಟದ ತಟ್ಟೆಯನ್ನು ನೆಲದ ಮೇಲಿಟ್ಟು ಮಂಡಿಯೂರಿ ಕುಳಿತುಕೊಂಡು ಊಟ ಮಾಡುವರು. ಚೈನಾದೇಶೀಯರು ಕುರ್ಚಿಯ ಮೇಲೆ ಕುಳಿತುಕೊಂಡು ಊಟ ಮಾಡುವರು ಮುಂದೆ ಊಟಕ್ಕೆ ಒಂದು ಮೇಜು ಇರುತ್ತದೆ. ಊಟದ ಸಮಯದಲ್ಲಿ ಚಮಚ ಮತ್ತು ಎರಡು ಕಡ್ಡಿಗಳನ್ನು ಉಪಯೋಗಿಸುತ್ತಾರೆ ಹಿಂದಿನ ಕಾಲದಲ್ಲಿ ಗ್ರೀಕ್ ಮತ್ತು ರೋಮನ್ ಜನರು ಊಟ ಮಾಡುವುದಕ್ಕೆ ಮೇಜನ್ನೇ ಉಪಯೋಗಿಸುತ್ತಿದ್ದರು. ಕುರ್ಚಿಯ ಮೇಲೆ ಕುಳಿತುಕೊಂಡು ಕೈ ಬೆರಳುಗಳಿಂದಲೇ ಊಟ ಮಾಡುತ್ತಿದ್ದರು.

ಆದರೆ ಈಗ ಚಮಚ, "ಫೋರ್ಕ್" ಮುಂತಾದುವನ್ನು ಉಪಯೋಗಿಸುತ್ತಾರೆ. ಚೈನೀಯರರೀತಿಊಟಮಾಡುವುದು ಒಂದು ಕಸರತ್ತು. ಅದಕ್ಕೆ ತುಂಬಾ ಕುಶಲತೆ ಬೇಕು. ಹೇಗೆ ನಮ್ಮ 'ಪಾನ್‌ವಾಲಾ'ಗಳು ವೀಳ್ಯದೆಲೆ ಮಡಿಸುವುದಕ್ಕೆ ಎರಡು ಕಡ್ಡಿಗಳನ್ನು ಉಪಯೋಗಿಸುವರೋ, ಹಾಗೆಯೇ ಚೈನಾ ದೇಶಿಯರು ಎರಡು ಕಡ್ಡಿಗಳ ಸಹಾಯದಿಂದ ತರಕಾರಿಯನ್ನು ಹಿಡಿದುಕೊಂಡು ಬಾಯಿಗೆ ರವಾನಿಸುವರು.

ಸಂಗ್ರಹ— ಶ್ರೀ ಸುರತ್ಕಲ್
ರಾಮಕೃಷ್ಣ ಹೆಬ್ಬಾರ್.



ಕಾರ್ಕಳ ಮುನ್ಸಿಫ್ ಕೋರ್ಟಿನಲ್ಲಿ

S. C. 183/1967.

R. ನರಶಿಂಹ ಪ್ರಭು —ವಾದಿ.
ಮುಕುಂದ ಭಟ್ಟ —ಪ್ರತಿವಾದಿ.

ಮುಕುಂದ ಭಟ್ಟ, ತಂದೆ ನಾರಾಯಣ ಭಟ್ರ ಮಗ, ಕಾರ್ಕಳ ಕಸಬೆಯಲ್ಲಿರುವವ—

ಪ್ರತಿವಾದಿ ಆದ ನಿಮಗೆ ಈ ಮೂಲಕ ತಿಳಿಸುವದೇನೆಂದರೆ—

ನೀವು ತಾ. 12—6—1964ರಲ್ಲು ರೂ. 250ಕ್ಕೆ ವಾದಿಗೆ ಬರಕೊಟ್ಟ ಡಿಮಾಂಡ್ ಪ್ರೋಮಿಸರಿ ನೋಟಿನ ಅಸಲು ಬಡ್ಡಿ ರೂಪಾಯಿ 296—00ಕ್ಕೆ ವಾದಿಯು ನಿಮ್ಮ ಮೇಲೆ ದಾಕ್ಲು ಮಾಡಿದ ಸದ್ರಿ ದಾವೆಯು ತಾ. 4—10—1967ಕ್ಕೆ ನಿಮಗೆ ಆಕ್ಷೇಪಕ್ಕೆ ನೋಟೀಸಿಗೆ ಇಟ್ಟಿದೆ. ಆಕ್ಷೇಪ ಇದ್ದರೆ ಸದ್ರಿ ದಿನ ಬೆಳಿಗ್ಗೆ 10ಘಂಟೆಗೆ ಮೇಲ್ಕಂಡ ಕೋರ್ಟಿನ ಮುಂದೆ ನೀವು ಹಾಜರಾಗಿ ಉದಾಹರಣೆ ಕೊಡ ತಕ್ಕದ್ದು. ತಪ್ಪಿದರೆ ನಿಮ್ಮ ಗೈರ ಹಾಜರಿಯಲ್ಲಿ ದಾವಾ ತೀರ್ಮಾನವಾಗುವದು ಎಂತ ಕೋರ್ಟಿನ ಹುಕ್ಕುಂ ಪ್ರಕಾರ ತಿಳಿಸಿಯದೆ.

K. S. Kamath
Advocate for Plff.
Karkala, 16—9—67.

NAVAYUGA 28—9—1967
Registered with the Registrar of News Papers for India under No. K. N. 3546/'57

5264 The Editor, 'Prabhath', Car Street, Mangalore 1, S. K.

REGD. No. B. G. 176
LICENCE No. 31
Licensed to Post without Prepayment

ಸಾಹಿತಿ ಗಳಿಸಿದ

# ಪ್ರಥಮ ಸಂಭಾವನೆ

ಬರೆದವರು :
ಶ್ರೀ ಎಚ್. ಎಂ. ನಾರಾಯಣ ಭಟ್

ಇದೊಂದು ಕಥೆಯಲ್ಲ. ನಡೆದ ಸಂಗತಿ. ರಮೇಶನು ತನ್ನ ಜೀವನ ಪ್ರಾರಂಭಿಸಿ ಹೆಚ್ಚು ವರ್ಷಗಳಾಗಿರಲಿಲ್ಲ. ವಿವಾಹವಾಗಿ ಕೇವಲ ನಾಲ್ಕು ವರ್ಷಗಳಾಗಿದ್ದವು. ಜಗತ್ತು ರಮೇಶನ ವಿವಾಹವನ್ನು ಅಂಗೀಕರಿಸಿತೋ ಇಲ್ಲವೋ! ನಳಿನಿಯೊಂದಿಗೆ ರಮೇಶನು ರೂ. ೧೦ರ ಬಾಡಿಗೆಯ ಒಂದು ಕೊಠಡಿಯಲ್ಲಿ ಜೀವನ ನಡೆಸುತ್ತಿದ್ದ ಜೀವನದಲ್ಲಿ ಸಾಹಿತ್ಯವನ್ನೇ ಆರಾಧಿಸುವ ರಮೇಶನಿಗೆ ಕುಡಿಯಲು ಗಂಜಿ, ಉಡಲು ಬಟ್ಟೆ, ಸ್ವಂತ ಮನೆ, ಸಾಹಿತ್ಯ ಸೃಷ್ಟಿಗೆ ಬೇಕಾದ ಕಾಗದ...ಇತ್ಯಾದಿಗಳದೇ ಸಮಸ್ಯೆಗಳ ಕ್ಯೂ! ಏನೂ ಪರಿಣಾಮವಿಲ್ಲ, ಬಂಧುಗಳಾಗಲೀ ಸ್ನೇಹಿತರಾಗಲೀ ಸಹ ಪ್ರವರ್ತಕರಾಗಲೀ ಸಹಾಯಕ್ಕಿಲ್ಲ. ಒಂದು ಮುದಿ ಬೆಕ್ಕು ಮಾತ್ರವೇ ಅಡಿಗೆ ಪಾತ್ರೆಯ ಬಳಿಯೂಗಿಯೂ ಚಾಪೆಯ ಬಳಿಯೂಗಿಯೂ ಅಲೆಯುತ್ತಾ 'ಮಿಯಾಂ' ಶಬ್ದವೆಬ್ಬಿಸುತ್ತಾ ಸಂತಾಪ ವ್ಯಕ್ತ ಪಡಿಸುತ್ತಿದೆ.

ಅಕ್ಕಿ ಮತ್ತಿತರ ನಿತ್ಯೋಪಯೋಗಿ ವಸ್ತುಗಳ ಬೆಲೆ ದಿನದಿಂದ ದಿನಕ್ಕೆ ಏರುತ್ತಿತ್ತು. ಜನ ಸಾಮಾನ್ಯರಿಗೆ ಎಟಕದಷ್ಟು ಎತ್ತರಕ್ಕೆ ಸಾಧನಗಳ ಬೆಲೆ! ರಾಜಕೀಯ ನಾಟಕವೂ ಸಂಸಾರ ನಾಟಕವೂ....ಇವೆರಡ ಸಮನ್ವಯವಾದ "ಜೀವನ ಸಂಗ್ರಾಮ" ಎಂಬ ಹೆಸರ ಕಥೆಯನ್ನು ರಮೇಶ ಬರೆದು ಬೆಂಗಳೂರಿನ ಒಂದು ಜನಪ್ರಿಯ ಸಾಪ್ತಾಹಿಕಕ್ಕೆ ರವಾನಿಸಿದ.

'ಅವರೇನಾದರೂ ಸಂಭಾವನೆ ಕೊಡುವರೇ?..."–ನಳಿನಿ ಪ್ರಶ್ನಿಸಿದಳು. "ಕೊಡಲೂ ಸಾಕು...."

ಹೊರು ಹಸಿದಿದ್ದರೂ ಕಣ್ಣೀರಿನ ಹೊಳೆಯನ್ನೇ ಈಜಿದ್ದರೂ ಹೊಟ್ಟೆ ಬೆನ್ನಿಗೇ ಅಂಟಿಕೊಂಡಿದ್ದರೂ ಹಸಿ ಗೆಣಸು, ಹಸಿಮೀನು, ನೆಲಗಡಲೆ, ಹಸಿ ಸಪ್ಪು....ಇತ್ಯಾದಿಗಳನ್ನೇ ತಿಂದರೂ ತಿನ್ನದಿದ್ದರೂ ಕಾಲಚಕ್ರ ಉರುಳುತ್ತಲೇ ಇತ್ತು. ದಿನಗಳೂ ವಾರಗಳೂ ಕಳೆದವು.

ನಗೆಯಿಲ್ಲ. ಉತ್ಸಾಹವಿಲ್ಲ; ಆಟವಿಲ್ಲ. ಬರೆಯುವಿಕೆಯೂ ಇಲ್ಲ; ಓದುವಿಕೆಯೂ ಇಲ್ಲ....ಎಲ್ಲವೂ ಶೂನ್ಯ!

ದಂಪತಿಯರೀರ್ವರೂ ಆಶಕ್ತರಾಗಿ ಹಸಿದ ಹೊಟ್ಟೆಯ ಉಪಟಳವನ್ನು ಶಪಿಸುತ್ತಿದ್ದರು. "ಊಟಕ್ಕಿಲ್ಲದವರು ವಿವಾಹವಾಗುವುದೇಕೆ?...." ಇಬ್ಬರೆದೂ ಒಂದೇ ಪ್ರಶ್ನೆ! ಕೇಳುವುದಾರಲ್ಲಿ?

"ಅಮ್ಮಾ! ಸ್ವಲ್ಪ ಧರ್ಮ ಕೊಡಿ, ತಾಯೀ!...." —ಓರ್ವ ಭಿಕ್ಷುಕಿ ತನ್ನ ಬೆ...ಲೆಯೇ ಒಂದು ಮಗುವನ್ನು ...ಕೇರಿಕೊಂಡು ಬಾಗಿಲಿದುರು ಬಂದುನಿಂತಳು

ಕೈಸನ್ನೆಯಿಂದಲೇ 'ನಾಸ್ತಿ'ಯೆಂದಾಗ ಆ ಭಿಕ್ಷುಕಿ ಏನನ್ನೋ ಗೊಣಗುಟ್ಟುತ್ತಾ ನಡೆದಳು.

ಮಧ್ಯಾಹ್ನ ಸಮೀಪಿಸಿತು, ಪೋಸ್ಟ್‌ಮೇನ್! ಎಲ್ಲಿಂದ ಬಂತೋ ಉತ್ಸಾಹ? ನಳಿನಿ ಬೇಗನೆ ಎದ್ದು ಬಾಗಿಲ ಬಳಿಗೆ ಸರಿದಳು. ಒಂದು ಪತ್ರಿಕೆಯನ್ನು "ಕವರನ್ನೂ" ಕೊಟ್ಟು ಪೋಸ್ಟ್‌ಮೇನ್ ಹೇಳಿದ್ದು, "ರಮೇಶರಿಗೊಂದು ಮನಿಯಾರ್ಡರೂ ಇದೆ" ಎಂದಾಗಿತ್ತು.

ಪೋಸ್ಟ್‌ಮೇನ್‌ನ ಮಾತುಗಳನ್ನು ಮಲಗಿದಲ್ಲಿಂದಲೇ ಕೇಳಿದ ರಮೇಶ ವಿಚಾರಿಸಿದ: —

'ಎಷ್ಟು ರೂಪಾಯಿ?....ಎಲ್ಲಿಂದ?"

'ರೂ. 25....ಬೆಂಗಳೂರಿನಿಂದ"

ರಮೇಶ ಎದ್ದು ಪತ್ರಿಕೆಯನ್ನು ಬಿಡಿಸಿ ತನ್ನ ಕಲಾ ಸೃಷ್ಟಿಗಾಗಿ ಹುಡುಕಲಾರಂಭಿಸಿದಾಗ, 'ಸರ್! ಹೊತ್ತಾಯಿತು. ಈ ಫೋರ್ಮಿನಲ್ಲಿ ದಸ್ಕತು..."ಎಂದು ಪೋಸ್ಟ್‌ಮೇನ್ ಫೋರ್ಮ್ ನೀಡಿದ.

ರಮೇಶನಿಗೆ ರೂ. 25 ಲಭಿಸಿತು. ಅದನ್ನು ನಳಿನಿಯ ಕೈಗಿತ್ತು, ತಾನು ತನ್ನ 'ಕತೆ'ಯನ್ನೋದುವುದರಲ್ಲೇ ತಲ್ಲೀನನಾದ....ಕತೆಗೆ ಅನುಗುಣವಾದ ಒಂದು ಚಿತ್ರವನ್ನೂ ಪ್ರಕಟಿಸಲಾಗಿದೆ.

ತನ್ನ ಕತೆಯನ್ನೇ ಮೇಲಿಂದ ಮೇಲೆ ನೋಡಿ ರಮೇಶನು ಕವರನ್ನೊಡೆದು ಪತ್ರವನ್ನೋದುತ್ತಿದ್ದಂತೆ ಆತನ ಮುಖವು ಮತ್ತಷ್ಟು ಪ್ರಕಾಶಮಾನವಾಗುವುದನ್ನು ಗಮನಿಸಿದ ನಳಿನಿ ಸಮೀಪಿಸಿ ವಿಚಾರಿಸಿದಳು.

'ಸಂಪಾದಕರ ಅಭಿನಂದನಾ ಪತ್ರ.... ಇಂತಹ ಕಲಾಸೃಷ್ಟಿಗಳಿಗೆ ಸದಾ ಹಾರ್ದಿಕ ಸ್ವಾಗತವೆಂದೂ ಕೊನೆಯ ಪಾರಾದಲ್ಲಿ ಬರೆದಿದ್ದಾರೆ....'

ಸಂತೋಷಮಯ ವಾತಾವರಣ. ಈರ್ವರ ಮುಖಗಳಲ್ಲಿಯೂ ಆಹ್ಲಾದವು ತಾನಾಗಿ ಹುಟ್ಟಿತ್ತು.

ರಮೇಶನು ರೂ. ೧೦ರ ಸಹಿತ ಸಮೀಪದ ಅಂಗಡಿಗೆ ತೆರಳಿದವನು ಮರಳುವುದರ ಮುನ್ನವೇ ನಳಿನಿ ಒಲೆ ಹಚ್ಚಿ ನೀರಿರಿಸಿದ್ದಳು.

ಅಕ್ಕಿ, ತರಕಾರಿ, ಕಾಫಿ ಪುಡಿ, ಬೆಲ್ಲ, ಎಣ್ಣೆ, ಸಂಬಾರ ಜೀನಸುಗಳ ಸಹಿತ ರಮೇಶನ ಆಗಮನವಾದೊಡನೆಯೇ ನಳಿನಿ ರುಚಿಕರವಾದ ಅಡಿಗೆ ಮಾಡಿದಳು.

ಸಾಹಿತ್ಯ ಸೃಷ್ಟಿ, ಕಲೆಯ ಉದ್ದೇಶ, ಪತ್ರಿಕೋದ್ಯಮ ಮುಂತಾದವುಗಳ ಕುರಿತು ಇಬ್ಬರೂ ಉತ್ಸಾಹದ ಮಾತುಕತೆಗೆ ಪ್ರಾರಂಭಿಸಿದ್ದಾರೆ.

ಇಬ್ಬರೂ ಸಂತುಷ್ಟ ಭೋಜನ ಮಾಡಿದರು. ಆ ಊಟದ ರುಚಿ! ಅದರ ಬಗ್ಗೆ ನವ್ಯ ಸಾಹಿತ್ಯಕ್ಕೆ ರಮೇಶನಿಗೆ ಮತ್ತೂ ಸ್ಫೂರ್ತಿಯುಂಟಾಯಿತು.



## ಬಲ್ಲಿರಾ ?

ಬಿಸಿ ನೀರಿನಲ್ಲಿ ಅದ್ದಿದ ಚೂರಿಯಿಂದ ಸುಲಭವಾಗಿ ಬ್ರೆಡ್ಡನ್ನು ತೆಳುವಾಗಿ ತುಂಡು ಮಾಡಬಹುದು.

ಕುದಿಯುವ ನೀರಿನಲ್ಲಿ ತಂಗಲನ್ನವನ್ನು ಹಾಕಿ ಸ್ವಲ್ಪ ಬಿಸಿ ಮಾಡಿದರೆ ಅದು ಈಗ ತಾನೆ ಮಾಡಿದ ಅನ್ನದಂತೆ ಉಪಯೋಗಕ್ಕೆ ಬರುವುದು.

ನಿಂಬೆ ಹಣ್ಣಿನ ರಸವನ್ನು ಹಿಂಡಿದ ನೀರಿನಲ್ಲಿ ಹಳಸಿದ ಹಸಿರು ತರಕಾರಿಯನ್ನು ಅದ್ದಿ ತೆಗೆದರೆ ಅದು ಉತ್ತಮ ತರಕಾರಿಯಾಗುತ್ತದೆ.

ಒಣಗಿದ ಬ್ರೆಡ್ಡನ್ನು ಎರಡು ನಿಮಿಷ ಹಬೆಗೆ ಇಟ್ಟು ... ಪುನಃ ಮೃದುವಾಗುವುದು.

ಜಿಗಣೆ ಕಚ್ಚಿದಾಗ ಸ್ವಲ್ಪ ಸುಣ್ಣವನ್ನು ನೀರು ಮಾಡಿ ಹಚ್ಚಿದರೆ ಕೂಡಲೇ ಬಿಡುತ್ತದೆ.

ಕರಿಬೇವಿನ ಸೊಪ್ಪನ್ನು ಕಡ್ಡಿಯಿಂದ ಬೇರೆ ಮಾಡಿ, ಒಂದು ಚಾ ಚಮಚ ಉಪ್ಪಿನೊಡನೆ ಒಂದು ಸೀಸೆಯಲ್ಲಿ ಹಾಕಿಟ್ಟರೆ ನಾಲ್ಕು ದಿವಸಗಳವರೆಗೆ ಕೆಡದೆ ಇಡಬಹುದು.

ಸುಟ್ಟ ಗಾಯಕ್ಕೆ ತಕ್ಷಣ ಜೇನು ತುಪ್ಪವನ್ನು ಸವರಿ ನೋಡಿ ಬೊಕ್ಕೆಗಳು ಏಳುವುದಿಲ್ಲ.

ಚಿಟಿಕೆಯಷ್ಟು ಸೋಡಾ ಹುಡಿ ಕಾಫಿ, ಟೀ ಮಾಡುವಾಗ ಬಳಸಿ ನೋಡಿ ಪಾನೀಯಗಳ ಬದಲಾದ ಬಣ್ಣವನ್ನು ಹಾಗೂ ರುಚಿಯನ್ನು.

—ಪಿ. ವಿ.



...lished by ... H. Sh...ty at the Navayuga Press, Udipi, S. India.